


ಸಂಪುಟ [illegible] | ಏಪ್ರಿಲ್ ೧೯೫೦ | ಸಂಚಿಕೆ ೧

## ನಮ್ಮ ನಮ್ಮ ಮಾತು

★★

ಪ್ರಿಯ ಓದುಗರೇ !

ಕಾಲ ಕೆಟ್ಟು ಹೋಯ್ತು ಅಲ್ಲವೇ ? ಹುಡುಗರು ಹೇಳಿದಹಾಗೆ ಮುದುಕರು ಕೇಳುವುದಿಲ್ಲ. ಜನ ಹೇಳಿದ ಹಾಗೆ ಧಣಿ ಕೇಳುವುದಿಲ್ಲ. ಮನ ಹೇಳಿದಂತೆ ಮಾಡಲಾಗುವುದಿಲ್ಲ. ವಿರೋಧಿ ಸಂವತ್ಸರ ಅಲ್ಲವೇ ?

ಅದು ಮುಗಿಯಿತು. ಈಗ ವಿಕೃತಿ' ಹೆಸರು ಕೇಳಿದರೇ ಹೆದರಿಕೆ ಅಲ್ಲವೇ ? ಹೇಗಪ್ಪಾ ಮುಂದೆ ? ಎನ್ನಿಸುತ್ತೆ ಅಲ್ಲವೇ ?

ಅದನ್ನೇ ಹೇಳಬೇಕು ಎಂದಿದ್ದೆ. ವಿಕೃತಿ ಎಂದರೆ, ವಿರಾಟ್ ಸ್ವರೂಪನ ಕೃತಿ ಅಂದರೆ ಕುಂದುಂಟೇ ? ಕುಂದಿರಲಾಗುತ್ತದೆಯೇ ? ನೋಡುವುದಕ್ಕೇನೋ ಬೆಂಗಾಳಿ ಅಂದರೆ ಬೆಂದ ಕಾಳ ಎನ್ನಿಸಬಹುದು. ಪಂಜಾಬ ಅಂದರೆ ಪಂಜು ಬಿದ್ದ ನೀರು ಎನ್ನಿಸಬಹುದು. ರಷ್ಯಾ ಎಂದರೆ ರಷ್ಯಾ ಎಂದು ಮಾರ್ದನಿ ಬರಬಹುದು. ಆಫ್ರಿಕಾ ಖಂಡ ಎಂದರೆ, ಒಡೆದ ಖಂಡವಾದ ಆಫ್ರಿಕಾ ಅನ್ನಬಹುದು. ಕಡೆಗೆ ಮೇಲ್ಮಟ್ಟದ, ಆಧ್ಯಾತ್ಮಿಕ ದೇಶ ಎಂದೆನಿಸಿಕೊಂಡ ಟಿಬೆಟ್ ಕೂಡ "Horns of a Dalai Lama" ಅಂದರೆ, ದ್ವಂದ್ವ ಸಮಾಸಕ್ಕೆ ತುತ್ತಾಗಿರಬಹುದು.

ಆದರೆ ವಿರಾಟ್ ಸ್ವರೂಪಿಗೆ ಇವೆಲ್ಲಾ ಒಂದು ಸಂವತ್ಸರದ ಕೃತಿ. ಒಂದು ಆಟ. ಒಂದು ನೋಟ. ಒಂದು ದೃಶ್ಯ. ಅಲ್ಲವೇ ?

ಆದಂತಾಗಿತ್ತು. ಪಕೃ...
ನಿಲುವುಗಳಿಂದ, ತುಂಬಿದ
ಕೇರಿಯಲ್ಲಿ ಸಿಕ್ಕವರ, ಊರಲ್ಲಿ ಇದ್ದ...
ತ್ತಿದ್ದೇನೆ. ಕಾಡು ಹುಡುಗಿ ಊರಿಗೆ ಬಂ...
ಬಿಟ್ಟಿದೆ. ಬೆಲ್ಲದ ಬಸುರಾದ ಕಬ್ಬುಕೂಡ ಕೂಡಿಬಂದು...
ಮಾಡಿಕೊಂಡು, ಕಾಲಕ್ಕೆ ತಕ್ಕಂತೆ ಕಾಯಕಲ್ಪ ಮಾಡಿಕೊಂಡು ಬ...
ಯತ್ನಿಸಿದ್ದೇನೆ. ಹಳ್ಳಿಯ ಕಣಿ ಹೇಳುವ ನಾನೇ ಈ ಜೀವನದ ಸೊಬ...
ಸವಿಯುವಾಗ ನೀವೇಕೆ ಜೋಲು ಮುಖ ಹಾಕಿಕೊಳ್ಳಬೇಕು? ನೀವು ನಗಿ.
ನೀವೂ ಜನಜೀವನದಲ್ಲಿ ಪೂರ್ಣಭಾಗಿಯಾಗಿ. ನನ್ನ ಕಣಿ ಕೇಳಿ ಎಂದು
ಹೇಳುತ್ತಿದ್ದಾಳೆ.

ಈ ಕಣಿ ಹೇಳಲು ಹೊರಟಾಗ ನಗುನಗುತ ನೆರವಾದ ಲೇಖಕರಿಗೂ, ...ಗುಟದರೂ ನಕ್ಕ ಜಾಹೀರಾತುದಾರರಿಗೂ, ಮುಳ್ಳೇನೆ ಕೊಟ್ಟರೂ ಕಿಲಕಿಲ ...ದ ವ್ಯಂಗ್ಯ ಚಿತ್ರಕಾರರಿಗೂ—ಹಾಗೂ ಅವಸರ ಪಡಿಸಿದರೂ ಬೇಸರ ಪಡದೆ ಹಾದಿಗೆ ತಂದಿಟ್ಟ ನನ್ನು ಅಚ್ಚು ಕೂಟದವರಿಗೂ, ಕೊರವಂಜಿಯು ಚಿರಋಣಿ.

ವ್ಯವಸ್ಥಾಪಕ ವರ್ಗದವರು ಸಂಪಾದಕರ ಕಿರುಕುಳಗಳನ್ನು ಎಣಿಸದೆ, ಬುಸುಗುಟ್ಟಿದರೂ ಬೇನೆಬಾರದಂತೆ ವ್ಯವಸ್ಥೆ ಮಾಡಿದುದಕ್ಕೆ ಕೊರವಂಜಿಯು ಧನ್ಯವಾದಗಳನ್ನು ಅರ್ಪಿಸುತ್ತಾಳೆ.

ಬರುವ ಸಂವತ್ಸರದಲ್ಲಿ ಎಲ್ಲರಿಗೂ ಜಗದೀಶನು ಸುಖಸಂಪತ್ತಿಗಳನ್ನು ಕೊಡಲೆಂದೂ, ಜೀವ ಹಿಯುವುವಾದ ಕಷ್ಟಗಳು ಬಂದಾಗ ನಗುತ ಎದುರಿಸ... ಶಕ್ತಿಸಾಮರ್ಥ್ಯಗಳನ್ನು ಕೊಡಲೆಂದೂ ಮನಸಾರೆ ಆತನಲ್ಲಿ ಪ್ರಾರ್ಥನೆಮಾಡು...

ನಿಮ್ಮವ,

**ರಾ. ಶಿ.**

**ವಿ.ಸೂ.**—ದಯವಿಟ್ಟು ಜಾಹೀರಾತುಗಳನ್ನು ಓದಿ. ನಿಮ್ಮ ಮನಸ್ಸನ್ನು ಹಿಡಿಯುವಂತೆ—ಚಾಲೂಕಾಗಿ ಬರೆಯಲ್ಪಟ್ಟಿವೆ. ಅವು ಸಾಮಾನುಗಳಿಗೆ ತಕ್ಕಂತೆ ಸುರುಚಿ.

---o---

...ಷ ಸಚಿಕೆಯನ್ನು ಪ್ರಕಟ
...ವನ್ನು ತಿಳಿದು ನನಗೆ ಬಹಳ

...ನದಲ್ಲಿ, ಸಾಮಾಜಿಕ ಜೀವನದಲ್ಲಿ ಮತ್ತು ಮುಖ್ಯ
ಯ ರಂಗದಲ್ಲಿ ಶುಷ್ಕ ಟೀಕೆ ಮತ್ತು ಕುಹಕ ಟೀಕೆಗಳೇ ಬಾಹುಳ್ಯ
ವನ್ನು ಹೊಂದುತ್ತಿವೆ. ನಗುಟೀಕೆಯಾಗಲಿ, ರಚನಾತ್ಮಕ ಟೀಕೆಯಾಗಲಿ ಮತ್ತು ಅರಿವಿನ ಹಿನ್ನೆಲೆಯಿಂದ ರೂಪಿತವಾದ ಟೀಕೆಯಾಗಲೀ ಅತಿ ವಿರಳವಾಗಿರುತ್ತದೆ. ಯಾವುದಾದರೊಂದು ಕಾರ್ಯಕ್ರಮ ಅಥವ ಯೋಜನೆಯನ್ನು ಹೂಡಿದರೆ, ಅದು ಸದ್ಭಾವನೆಗಳಿಂದ ಪ್ರಾರಂಭಿಸಲ್ಪಟ್ಟರೂ ಕೂಡ, ಕ್ರಮೇಣ ರೂಪುಗೊಂಡು, ಮುಂದುವರೆಯುವ ಕೆಲವು ಸನ್ನಿವೇಶಗಳಲ್ಲಿ ಹಾದಿ ಮತ್ತು ಗುರಿಯನ್ನು ತಪ್ಪಿ ವಿಪರೀತಕ್ಕೆ ತಿರುಗಬಹುದು ಎಂಬುದನ್ನು ಮನದಟ್ಟಾಗುವಂತೆ ತೋರಿಸುವ ವ್ಯಂಗ್ಯ ಚಿತ್ರಗಳಾಗಲೀ ಅಥವ ಹಾಸ್ಯ ಲೇಖನಗಳಾಗಲೀ ಕನ್ನಡದಲ್ಲಿ ಹೆಚ್ಚಾಗಿ ಬಳಕೆಗೆ ಬಂದಿಲ್ಲ.

ಇಂಗ್ಲಾಂಡಿನ "ಪಂಚ್" ತೆರನಾದ ಮತ್ತು ಅಮೇರಿಕಾದ "ಕಾಲಂನಿಸ್ಟ್" ರೀತಿಯ ಬರಹಗಳಿಗೂ ಮತ್ತು ವ್ಯಂಗ್ಯ ಚಿತ್ರಗಳಿಗೂ ಅನುರೂಪವಾದಂಥ ಪ್ರಕಟಣೆಗಳನ್ನು ನಮ್ಮ ನಾಡಿನ ಸನ್ನಿವೇಶಗಳಿಗೆ ಹೊಂದಿಸಿಕೊಂಡು ಮೇಲ್ ದರ್ಜೆಯಲ್ಲಿ ಬಹಳ ಹೆಚ್ಚು ಹೆಚ್ಚಾಗಿ ಪ್ರಚುರಪಡಿಸಬೇಕು.

"**ಕೊರವಂಜಿ**"ಯು ಈ ತೆರನಾದ ಬರವಣಿಗೆ ಮತ್ತು ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸುವುದರಲ್ಲಿ ಮೇಲ್ಪಂಕ್ತಿಯನ್ನು ಹಾಕಿರುವ ವಿಷಯವನ್ನು ಮನಗಂಡು ಓದುಗರೆಲ್ಲರೂ ಹರ್ಷಿಸಬೇಕಾದದ್ದೇ ಸರಿ. ಈ ತೆರವಾದ ಲೇಖನಗಳು ಸುಸಂಸ್ಕೃತರಾದ ಲೋಕಾನುಭವಿಗಳಾದ ಎಲ್ಲಾ ರಾಜಕಾರಣಿಗಳಿಗೂ ಬಹಳ ಪ್ರಿಯವಾದವುಗಳೇ ಎಂದು ಹೇಳುವುದರಲ್ಲಿ ಸಂಶಯವಿರುವುದಿಲ್ಲ. ಇಂತಹ ನಗೆಮೊಗದ, ರಚನಾತ್ಮಕ ಮತ್ತು ವಿಡಂಬ ಪೂರ್ಣ ಟೀಕೆಗಳು ಮೊದಲು ನಗಿಸಿ ನಂತರ ಯೋಚನಾತರಂಗಗಳಲ್ಲಿ ಓದುಗರನ್ನು ಮುಗ್ನರಾಗುವಂತೆ ಮಾಡಿ ಅವರ ಮನಸ್ಸನ್ನು ರಚನಾತ್ಮಕ ಸುಧಾರಣೆಗಳ ಕಡೆಗೆ ಸೆಳೆಯುತ್ತವೆ.

"**ಕೊರವಂಜಿ**"ಯು ಇದೇ ರೀತಿ ಇನ್ನೂ ಉತ್ತಮ ದರ್ಜೆಯಲ್ಲಿ ಕನ್ನಡ ನಾಡಿನ ಸೇವೆಯನ್ನು ಉದಾತ್ತ ರೀತಿಯಲ್ಲಿ ಸಲ್ಲಿಸಲಿ. ಕನ್ನಡಿಗರನ್ನು ನಗಿಸ್ಲಿ, ಜೀವನ ಸಮಸ್ಯೆಗಳ ಕಹಿ ಅವರನ್ನು ಹೆಚ್ಚು ಕಾಡದಂತೆ ಮಾಡಲಿ. ಈ ಉದ್ಯಮವನ್ನು ಕೈಕೊಂಡಿರುವ ತಮಗೆ ಶ್ರೀ ಭಗವಾನರು ಸಾಕಷ್ಟು ಸಿದ್ಧಿಯನ್ನು ದಯಪಾಲಿಸಲಿ. ಇದೇ ನನ್ನ ಮನಃಪೂರ್ವಕವಾದ ಹಾರೈಕೆ.

ಇತಿ ತಮ್ಮವ,
**ಕೆ. ಚಂಗಲರಾಯರೆಡ್ಡಿ.**

"ಅಕ್ಕಿ ಮೇಲೆ ಆಶೆ—ಗಂಟನ ಮೋಹ

—ಈ ನಾಣ್ಣುಡಿಗೆ ಸರಿಯಾಗಿದೆ—ರೂಪಾಯಿ ಅಕ್ಕೀ. ಡಿಪೋ ಸುಂಕ. ಹಾಕೋದು—ತೆಗೆಯೋದು.

*　　　*　　　*

ಆಹಾರ ಡಿಪೋಗಳ ಹತ್ತಿರ ಕ್ಯೂ ಕಟ್ಟುವವರ ಸಹಾಯಕ್ಕಾಗಿ ಅಲ್ಲಲ್ಲೇ ಕ್ಯಾಂಟೀನ್‌ಗಳನ್ನು ಏರ್ಪಡಿಸಬೇಕೆಂದು ಸಲಹೆ ಬಂದಿದೆಯಂತೆ.

*　　　*　　　*

ಈ ಭಾನುವಾರ ಅಂಚೆಯವರಿಗೆ ರಜಾ ಬಂದಿದ್ದರಿಂದ, ಕುಹಕಿಡಿಗಳ ಸ್ಪರ್ಧೆಯನ್ನು ಒಂದು ದಿವಸ ಮುಂದುವರಿಸಬಹುದು—ಅಲ್ಲವೇ?

*　　　*　　　*

ಲೋಕದಲ್ಲಿ ಶೇಕಡಾ ೫೦ ಹೆಂಗಸರು. (ಸೆನ್ಸಸ್ ವರದಿ)

—ಇಂಗ್ಲೀಷ್ ಭಾಷೆಯೇ ಚೆನ್ನು—ಸೆನ್ಸಸ್ ಅಂದರೆ ಲೆಕ್ಕ—ಹಾಗೂ ಬುದ್ಧಿ—ಬುದ್ಧಿ ಇದ್ದವರು, ಸೆನ್ಸಸ್ ಸರಿಯಾಗಿದ್ದವರು ಹೆಂಗಸರನ್ನೂ ಲೆಕ್ಕಕ್ಕೆ ಸೇರಿಸುತ್ತಾರೆಯೇ" ಎಂದು ಓದುಗರೊಬ್ಬರು ಬರೆದಿದ್ದಾರೆ.

*　　　*　　　*

ನವಭಾರತ ಸೃಷ್ಟಿಯಲ್ಲಿ ನಮ್ಮ ಮುಂದಲಿಗೆಗಳು ತಮ್ಮ ಪಾತ್ರವನ್ನು ನೆರವೇರಿಸುತ್ತವೆ. (ಜಾಹಿರಾತು)

—ಆಹಾ! —

*　　　*　　　*

ಭಾನುವಾರ ಅಂಚೆಯವರಿಗೆಲ್ಲಾ ರಜಾ ಬಂದಿದೆಯಂತೆ.

—ಇನ್ನು ಮೇಲೆ ಅವರು ಸುಖವಾಗಿ ಭಾನುವಾರ ಬೆಳಿಗ್ಗೆ ಆಡ್ಡಾಡಲು ಹೋಗಿ ಬರಬಹುದು.

*　　　*　　　*

ಬಜೆಟ್ ಬಂದ ಹೊಸದು. ಇಬ್ಬರು ಡಾಕ್ಟರುಗಳು ಮಾತನಾಡಿಕೊಳ್ಳುತ್ತಿದ್ದರು. "ನಾನು ನಾಲ್ಕು ಲಕ್ಷ ಕೊಟ್ಟೆ ಬೆಳಿಗ್ಗೆ"—ಇನ್ನೊಬ್ಬ, "ನಾನು ಹತ್ತು ಲಕ್ಷ ಕೊಟ್ಟೆ ಮಧ್ಯಾಹ್ನ"—ಅಷ್ಟು ಐಶ್ವರ್ಯವಾನೆ ಇವರಿಗೆ ಎನ್ನಿಸಿತು.

—ಆ ಮೇಲೆ ತಿಳಿಯಿತು; ಅವರು ಪೆನ್ನಿಸಿಲಿನ್ ವಿಚಾರ ಮಾತನಾಡಿದ್ದು ಅಂತ.

* * *

ಅಮೇರಿಕನ್ "ಝೂ"ಗೆ ನಮ್ಮ ದೇಶದ ೨ ಆನೆ ಮರಿಗಳು ಹೋದುವಲ್ಲಾ!

—ಈಗ ರಷ್ಯನರು ನಮಗೆ ಅದಕ್ಕೂ ದೊಡ್ಡದಾದ ನಾಲ್ಕು ಆನೆ ಮರಿಗಳನ್ನು ಭಾರತವು ಕಳಿಸಲಿ ಎಂದು ಯೂನೋದಲ್ಲಿ ಸವಾಲು ಹಾಕುವುದಂತೆ.

* * *

ಗೋವಾ ಪೋರ್ಚುಗಲ್ಲಿನ ಸಾಮ್ರಾಜ್ಯಕ್ಕೆ ಸೇರಿದ್ದಲ್ಲ—ಪೋರ್ಚುಗಲ್ಲೇ ಎಂದರಂತೆ ಸಾಲಝಾರ್.

—ಸಾಲಝಾರ್ ಅವರಿಗೆ ಜನಾಬ್ ಜಫರುಲ್ಲಾ ಅವರೇ ನ್ಯಾಯ ಸಲಹೆಗಾರರೆಂಬುದು ಇನ್ನೂ ತಿಳಿದು ಬಂದಿಲ್ಲವಂತೆ.

* * *

ಕಾಶ್ಮೀರದಲ್ಲಿ ಯುದ್ಧ—ಕಾಶ್ಮೀರದಿಂದ ಈಗ ಯುನೋಕ್ಕೆ ವರ್ಗಾಯಿಸಲ್ಪಟ್ಟಿದೆಯಂತೆ.

—ಯಾರನ್ನು ಮಧ್ಯಸ್ಥಿಕೆಗಾರರನ್ನಾಗಿ ಮಾಡಬೇಕು ಎಂದೇ ಯುದ್ಧವಂತೆ.

* * *

ಆಸ್ಪತ್ರೆ ಇದ್ದರೆ ಡಾಕ್ಟರಿಲ್ಲ—ಡಾಕ್ಟರಿದ್ದರೆ ಆಸ್ಪತ್ರೆ ಇಲ್ಲ—ಇಬ್ಬರೂ ಇದ್ದರೆ ಔಷಧಿಗಳೇ ಇಲ್ಲ ಎಂದು ಯಾರೋ ಕುಹಕ ಆಡಿದರಂತೆ.

—ಸದ್ಯ ಈ ಜಗಳದಲ್ಲಿ ಜನ ಬದುಕಿಕೊಂಡರು!

* *

ಸತ್ಕಾರ ಕೂಟ ಮುಗಿಯುವುದರೊಳಗೇ ಮುಖ್ಯ ಅತಿಥಿಯಾದ ವೈದ್ಯನು ಹೊರಡಲುದ್ಯುಕ್ತನಾದನಂತೆ — ಉತ್ಕಟಾವಸ್ಥೆಯಲ್ಲಿರುವ ರೋಗಿಯನ್ನು ನೋಡಲು.—

—ಸ್ನೇಹಿತನಂದನಂತೆ. "ವೈದ್ಯರೇ! ಅದೇಕೆ ಅಷ್ಟು ಅವಸರ—ಯಮನಿಗೇ ಅಷ್ಟು ಅವಸರ ಇಲ್ಲದಾಗ ನಿಮಗೇಕೆ ಆತುರ?"

## ಉರಿಗಾಳು

ಮಂತ್ರಿ ಮಂಡಲದವರು ತಮ್ಮ ಮಿತ್ರರಿಗೆ ಭಾರಿ ಹುದ್ದೆಗಳನ್ನು ಕೊಡುತ್ತಿರುವರು ಎಂದು ಅನೇಕರು ದೂರುತ್ತಿದ್ದಾರೆ. ಆದರೆ, ಅವರು ತಮ್ಮ ವಿರೋಧಿಗಳಿಗೆ ಭಾರಿ ಹುದ್ದೆಗಳನ್ನು ದಯಪಾಲಿಸಿರುವ ನಿದರ್ಶನಗಳೇ ಬಹಳ.

* *

ಒಂದು ಕೋಟಿ ಸ್ವಯಂ ಸೇವಕರನ್ನು ಕೂಡಿಸಿ ಅವರಿಗೆ ಸರ್ಕಾರವೇ ಅನ್ನ ಬಟ್ಟೆ ಒದಗಿಸಿ, ಅವರಿಂದ ವ್ಯವಸಾಯ ನಡೆಯಿಸಿ, ಆಹಾರ ಸಮಸ್ಯೆಯನ್ನು ಬಗೆ ಹರಿಸಬೇಕೆಂದು ಡಾ|| ರಾಂ ಮನೋಹರ ಲೋಹಿಯಾ ಹೇಳಿದರು....ಸರ್ಕಾರವೇ ಅನ್ನ ಬಟ್ಟೆ ಕೊಡುವುದಾದರೆ, ೩೦ ಕೋಟಿ ಸ್ವಯಂ ಸೇವಕರು ದೊರೆತಾರು.

* * *

ಕಾಳಸಂತೆಯವರನ್ನು ಕತ್ತಿಯ ಮೇಲೆ ಕೂರಿಸಬೇಕೆಂಬ ನಿರ್ಣಯವನ್ನು ಕೇಳಿ, ಸಂಸ್ಥಾನಾಮಳೆ ಅದನ್ನು ಪ್ರತಿಭಟಿಸಿ, ಕತ್ತಿಗಳು ವಿಕಾರವಾಗಿ ಅರಚಲು ಪ್ರಾರಂಭಿಸಿವೆಯಂತೆ.

* * *

ಜಪಾನ್ ದೇಶದಲ್ಲಿ ೧೧ ಸೆಕೆಂಡಿಗೊಂದರಂತೆ ಶಿಶು ಜನನವಾಗುತ್ತಿದೆಯಂತೆ....ಅಲ್ಲಿನ ವೈದ್ಯರು ನಿಜವಾಗಿಯೂ ಸ್ತೋತ್ರಾರ್ಹರು.

* * *

"ಹೈಡ್ರೋಜನ್ ಬಾಂಬ್ ಸ್ಫೋಟಿಸಿದರೆ ಇಡೀ ವಿಶ್ವ ಒಂದೇ ದಿನದಲ್ಲಿ ನಾಶವಾಗಿ ಹೋಗುವುದಿಲ್ಲ" (ಪ್ರಖ್ಯಾತ ಅಣು ಶಾಸ್ತ್ರಜ್ಞ ಡಾ॥ ಓಕೊ ಫಿಶ್ಚ್) ಹಾಗಾದರೆ, ಮರು ದಿನ ಅನಾಹುತಗಳ ವಿವರಗಳನ್ನು ಪೇಪರುಗಳಲ್ಲಿ ಓದಿ ಸಾಯಬಹುದು ನಾವು.

* * *

ವಯಸ್ಕರ ಶಿಕ್ಷಣದ ಪ್ರಚಾರವಾಗುತ್ತಿರುವುದರಿಂದ, ಮಕ್ಕಳು ತಾವು ದೊಡ್ಡವರಾದನಂತರ ಅಕ್ಷರ ಕಲಿಯುತ್ತೇವೆಂದು ಹಟ ಹಿಡಿಯಲಾರಂಭಿಸಿದಾರಂತೆ.

ಅಪಪ್ರಚಾರ ಶಾಸ್ತ್ರವನ್ನು ಕಲಿತುಬರಲು ಭಾರತದಿಂದ ಒಂದು ನಿಯೋಗ ವನ್ನು ಕರಾಚಿಗೆ ಕಳುಹಿಸುವ ಸಲಹೆ ಬಂದಿದೆಯಂತೆ.

* * *

ಮಂತ್ರಿವರ್ಗದವರು "ದೊಡ್ಡವರು" ಎಂಬ ಭಾವನೆ ಮಾಯವಾಗ ಬೇಕೆಂದು ಶ್ರೀ ಮಹಾವೀರ ತ್ಯಾಗಿಯವರು ಪಾರ್ಲಿಮೆಂಟಿನಲ್ಲಿ ಹೇಳಿದರು. ಏಕೆ? ಸಾಮಾನ್ಯವಾಗಿ ಎಲ್ಲ ಪ್ರಾಂತಗಳಲ್ಲೂ ಈ ಭಾವನೆ ಮಾಯವಾಗಿದೆ ಯಲ್ಲಾ.

* * *

"ಕೈಗಾರಿಕಾ ಪ್ರದರ್ಶನದಲ್ಲಿ ಮಾನ್ಯ ಮಂತ್ರಿಗಳು"....ಇದೊಂದು ಶುಭ ಸೂಚನೆ.

* * *

ಪೇಪರ್, ಪೆಪ್ಪರ್ (ಕಾಗದ, ಮೆಣಸು) ಎಂಬ ಪದಗಳನ್ನು ಒಂದೇ ಎಂದು ಭಾವಿಸಿ, ಅವುಗಳ ಅರ್ಥಗಳನ್ನು ಅದಲು ಬದಲು ಮಾಡಿದ ಪಾರ್ಲಿಮೆಂಟ್ ಸದಸ್ಯ ಶ್ರೀ ಸೇಠ್ ಗೋವಿಂದ ದಾಸ್‌ರವರು, "ಅದಕ್ಕೆ ಇಂಗ್ಲೀಷ್ ಭಾಷೆಯೇ ಹೊಣೆ" ಎಂದು ದೂರಿದರು....ಅದಕ್ಕೆ ಅವರ ಉಪಾಧ್ಯಾಯರೇ ಹೊಣೆ ಎಂದು ನಮಗೆ ತೋರುತ್ತದೆ.

* * *

ಬೆಂಗಳೂರು ನಗರದ ಮಕ್ಕಳು ಜವಾಹರಲಾಲನೆಹರೂರವರಿಗೆ ಒಂದು ಪತ್ರ ಬರೆದು, ಟೋಕಿಯೋ, ವಾಷಿಂಗ್‌ಟನ್, ಬೆರ್ಲಿನ್ ಮುಂತಾದ ನಗರ ಗಳಿಗೆ ಅವರು ಕಳುಹಿಸಿದಂತೆ, ತಮ್ಮ ಊರಿನ ಲಾಲ್‌ಬಾಗಿಗೆ ಒಂದು ಆನೆ ಯನ್ನು ದಯಪಾಲಿಸಬೇಕೆಂದು ಕೋರಿರುವರೆಂಬುದು ಸುಳ್ಳಂತೆ.

* * *

ಇಂಗ್ಲೆಂಡಿನಲ್ಲಿ ವೈದ್ಯವೃತ್ತಿಯಲ್ಲಿರುವ ಒಬ್ಬ ಭಾರತೀಯರಿಗೆ ಗಾಂಧೀಜಿ ಸ್ವಪ್ನದಲ್ಲಿ ಬಂದು ಸಂದೇಶ ನೀಡಿರುವರಂತೆ....ಕಾಂಗ್ರೆಸ್ ಮಂತ್ರಿಗಳೊಬ್ಬರು ಗಾಂಧಿಯನ್ನು ಸ್ವಪ್ನದಲ್ಲೂ ಕಾಣುತ್ತಿಲ್ಲವೆಂಬುದು ಸೋಜಿಗದ ಸಂಗತಿ.

* * *

ಪೂರ್ವ ಬಂಗಾಳದಲ್ಲಿರುವ ಅಲ್ಪಸಂಖ್ಯಾತರಿಗೆ ಅಲ್ಲಿನವರು ಈ ಬಾರಿಯ ಹೋಳಿ ಹಬ್ಬವನ್ನಾಚರಿಸಲು ತಮ್ಮ ಕೈಲಾದ ಸಹಾಯವನ್ನೆಲ್ಲ ಮಾಡಿ ಕೊಟ್ಟರು, ಎಂದು ಅಲ್ಲಿಯ ಮಂತ್ರಿಗಳು ಘೋಷಿಸಿರುವರು.

* * *

# ಕೊರವನ ಸಿಂಹಾವಲೋಕನ

ಸೂರ್ಯಕಾಂತಿ ಹೂವು ನೋಡಿಲ್ಲವೇ? ಅದನ್ನು ಯಾರಾದರೂ ಅಂಗೀಗೆ ಸಿಕ್ಕಿಸಿಕೊಂಡಿದ್ದು ನೋಡಿದ್ದೀರಾ? ನಾನನಕ ನೋಡಿತ್ತಿಲ್ಲ—ಈ ಯುಗಾದಿ ತನಕ. ಅವತ್ತು ಹಬ್ಬದೂಟ ಮಾಡಿ ಸಾಯಂಕಾಲ ಬೇಜಾರು ಕಳೆಯಲು ಕ್ಲಬ್ಬಿಗೆ ಹೋದಾಗ ಅಲ್ಲೀ ಕುಳಿತಿದ್ದ ನಮ್ಮ ಕೊರವ. ಬಟನ್ ಹೋಲ್‌ನಲ್ಲಿ ಸೂರ್ಯಕಾಂತಿ ಹೂವು!!

"ವಾರೇ! ಷೇರ್! ಇದೇನು ಮೋಜು" ಎಂದೆ ಆ ಹೂವನ್ನೇ ನೋಡುತ್ತಾ.

ಆ ಹೂವನ್ನು ಮೂಸಿ ನೋಡಿ, ಕೊರವ ಅಂದ "ಅಯ್ಯೋ! ಪಾಪಿ! ಅಷ್ಟೂ ತಿಳಿಯುಲ್ಲವೇ? ಈ ವಿಕೃತಿನಾಮ ಸಂವತ್ಸರದಲ್ಲಿ ಸೂರ್ಯನೇ ರಾಜಾ. ಸಸ್ಯಾಧಿಪ ಸೂರ್ಯ. ನೀರಸಾಧಿಪ ಸೂರ್ಯ—ಅದಕ್ಕೇ ಸೂರ್ಯನನ್ನು ಮೆಚ್ಚಿಸಬೇಕು. ಅದಕ್ಕೇ ಆ ಹೂವೇ ಈ ವರ್ಷ ಪ್ರಶಸ್ತಿ" ಅಂದ.

"ಈಗಿನ ಕಾಲದಲ್ಲಿ ರಾಜನ್ನ ಯಾರು ಕೇಳ್ತಾರೆ? ಈಗ ಮಂತ್ರೀನೇ ಬಲ. ಈ ವರ್ಷ ಗುರುವೇ ಮಂತ್ರಿ. ಅವನ್ನ ತಾಜಾ ಮಾಡಬೇಕು ಕೊರವ!" ಎಂದೆ.

ಯುಗಾದಿ ದಿನ ಇಷ್ಟು ಸುಲಭವಾಗಿ ಸೋಲುತ್ತಾನೆ ಅಂತ ನನಗೆ ತಿಳಿದಿರಲಿಲ್ಲ. "ಹೌದಲ್ಲಾ!" ಅಂತ ಮಾತ್ರ ಅಂದ.

* * *

"ವ್ಯಾಸ! ಅದೇನು ಮೇಧಾವೀ ಅಂತೀರಿ" ಅಂದ ಕೊರವ, ಕುರ್ಚಿಮೇಲೆ ಕಾಲೆಳೆಯುತ್ತಾ.

ಶುದ್ಧ ಅನಾಗರಿಕ. ಸಂಸ್ಕೃತಿ, ಪ್ರಾಚೀನ ಇಂತಹ ವಿಷಯಗಳಿಗೆ ಮನಸ್ಸು ಹಾಗಿರಲಿ, ಕಿವಿ ಕೂಡ ಕೊಡದೇ ಇದ್ದೋನು. ಇವತ್ತೇನು ವ್ಯಾಸ ಮಹಾಭಾರತ ಅಂತಿದಾನಲ್ಲ ಅಂತ ನಮಗೆಲ್ಲಾ ಗುಮಾನಿ—"ಇವನ ತಲೆ ಸರಿಯಾಗಿದೆಯೋ ಇವತ್ತು" ಅಂತ.

ಅವನೂ ನಮ್ಮ ಗುಮಾನಿಯನ್ನು ಊಹಿಸಿರಬೇಕು.

"ಅಲ್ಲಾ; ವ್ಯಾಸ ಮಹಾಮುನಿ ಈಗ ನಮ್ಮ ಕಾಲದಲ್ಲಿ ಆಗೋದನ್ನೆಲ್ಲಾ ಆಗ ಮಹಾ ಭಾರತದ ರೂಪಿನಲ್ಲೇ ಬರೆದಿದ್ದನಲ್ಲ!" ಅಂದ.

"ಹೇಗೆ" ಎಂದು ಹುಬ್ಬೆತ್ತಿದೆವು.

ಅದೇ ಹೇಳುಕ್ಕೆ ಬಂದಿದ್ದೆ. ಪಾಂಡವರೆಲ್ಲರೂ ಅರಗಿನ ಅರಮನೆಯಲ್ಲಿರಲಿಲ್ಲವೇ? ಇವತ್ತೋ ನಾಳೇನೋ ಬೆಂಕಿ ಬೀಳುತ್ತೆ ಆಗ ತಿರುಗಿ ಪದಚ್ಯುತರಾಗಬೇಕು ಎಂದು ಯೋಚಿಸುತ್ತಾ.

ಈಗಲೂ ಹಾಗೇ ಆಗಿದೆ ನೋಡಿ ಇಂಗ್ಲೆಂಡಿನಲ್ಲಿ—ಕಾರ್ಮಿಕ ಪಕ್ಷದವರು ಪಾಂಡವರಿದ್ದ ಹಾಗೆ ತಾನೇ—ಅರಗಿನ ಸರಕಾರದಲ್ಲಿ ಇದ್ದಾರೆ; ಎಂದು ಚರ್ಚಿಲ್ ಕೌರವರು ಸರ್ಕಾರಕ್ಕೆ ಬತ್ತಿ ಹತ್ತಿಸಿ ಭಸ್ಮ ಮಾಡುತ್ತಾರೋ? ಎಂದೇ ಹೆದರಿದ್ದಾರೆ.

"ಅಲ್ಲಾ! ಚರಿತ್ರೆ ಮರಿಕಳಿಸುತ್ತೆ ಅಂತಾರೆ—ಜ್ವರದ ಹಾಗೆ—ಅದಕ್ಕೇ ವ್ಯಾಸ ಎಂಥಾ ಮೇಧಾವಿ" ಎಂದ.

*　　　*




ಪರೀಕ್ಷೆಗೆ ಅಣಿಮಾಡಿಕೊಳ್ಳುವ ನಮ್ಮ ನವ ತರುಣಿಯರು.

ವಚನದಲ್ಲಿ ನಿನ್ನ ಹೆಸರನ್ನು ತುಂಬಿ ಭಿತ್ತಿಯಲ್ಲಿ ನಿನ್ನ ಚಿತ್ರವ ತುಂಬಿ, ಬೀರುವಿನಲ್ಲಿ ನಿನ್ನ ಭಾಷೆ ತುಂಬಿ, ಭಾಷಣದಲ್ಲಿ ನಿನ್ನ ಘೋಷಣ ತುಂಬಿ, ನಿನ್ನಂತೆ ಹೊಲಗೇರಿಯಲ್ಲಿರದೆ ಬದುಕಿದೆನಾದೊಡೆ, ನಿನ್ನಂತೆ ಮೂರನೆಯ ತರಗತಿಯಲ್ಲಿ ಕೂರದೆ ಮೆರೆದೆನಾದೊಡೆ, ನಿನ್ನಂತೆ ಚಿಂದಿಯ ನುಡದೆ ಶಿಂಗರಿಸಿಕೊಂಡೆನಾದೊಡೆ, ತಲೆದಂಡ, ತಲೆದಂಡ ತಿಂಬ ಪಿಂಡವೇ ದಂಡ, ಹೇಳಿದಳು ನಮ್ಮ ಮೋಹನ ದಾಸಗೆ ಕೊರವಂಜಿ ಕಾಯುವಪರಂಜಿ ದೇವಿ.

---

ಈಗಣ ರೇಷಣಕ್ಕಿಯ ತಿಂದರೆ, ತಿಂದಂತಲ್ಲದೆ ಒಡಲ ಪೊರೆಯಲಾದೀತೆ? ಈಗಣ ಹಾಲ ಕಡೆದರೆ, ನೀರಕಡೆದಂತಲ್ಲದೆ, ಬೆಣ್ಣೆಯ ಪಡೆಯಲಾದೀತೆ? ಈಗಣ ವೀಳ್ಯವ ಮೆಲಿದರೆ ತರಗೆಲೆಯ ಮೆಲಿದಂತಲ್ಲದೆ ರಸವನು ಸವಿದಂತಾದೀತೆ? ಈಗಣ ರೈತರ ಹೊಗಳಿದರೆ, ಮರಳ ಹೊಸಿದಂತಲ್ಲದೆ, ಅವರ ವರಣವ ಪಡೆದಂತಾದೀತೆ? ಈಗಣ ಪುಸ್ತಕವ ಪಠಿಸಿದರೆ, ಜಠರ ಶೂಲೆಯಲ್ಲದೆ, ಕಠೋರವನೆದುರಿಸಲಾದೀತೆ? ಇದನರಿತು ನಗುನಗುತ ಸುಮ್ಮನಿರು, ಎಂದಳು ಕೊರವಂಜಿ ಕಾಯುವಪರಂಜಿ ದೇವಿ.

---



ಗಂಟಲು ಒಡೆಯುವತನಕ ಮೊದಲು ಕೂಗುತ್ತಿದ್ದರು—
ಈಗ— ಮೈಕ್ ಹರಿಯೋತನಕ ಭಾಷಣ.

# ನಲ್ಲೀ ತಾವ್ ನಂ ಮಲ್ಲೀ

"ರಕ್ಷ"

ಬೇಲೂರ್ ಗುಡಿಯಾಗ್ ಕನಡೀ ಕೈಯಿನ್
ಯಿಗ್ರಾ ಇಲ್ವಾ ಅಲ್ಲಿ—
ಅಂಗೇ ಕೈನಾಗ್ ಚೌರ್ಗಿ ಯಿಡ್ಕೊಂಡ್—
ನಲ್ಲಿ ತಾವ್ ನಂ ಮಲ್ಲಿ! ॥ ೧ ॥

ಬಣ್ಣಾನೂ ಒಸಿ ಅಂಗೇನೇವಾ!
ಅಂಗೇನೆ ಎದೆಬಾವ!
ಮಲ್ಲಿ ಯಾರಾ? ಯಾಕ್—ಅವರಪ್ಪ
ಯೆಣ್ ಕೊಟ್, ನಂಗೆ ಮಾವ! ॥ ೨ ॥

ಅವರಪ್ಪಂಗ್ ಅವಳ್ ಜೀವದ್‌ಜೀವ!
ಅವರಮ್ಮಂಗ್ ಔಳ್ ಕಣ್ಣು!
ನಂಗನಕಾ—ಓ! ಏನ್ ಎಂಗೇಳ್ಲಿ!
ಬಾದಾಂ ಮಾವೀನಣ್ಣು! ॥ ೩ ॥

ಮಿಕ್ಸ್ಕೋರ್ ಯಾರಾರ್ 'ಮಲ್ಲೀ'ಂತಂದ್ರೆ
ಹಲ್ ಉದುರಿಸ್‌ಬುಟ್ಟಾಳು!
ನಾನ್ ಅನ್‌ಬೌದು—ಔಳ್ ನಂಗ್ ಯೆಂಡ್ರು!
ಸಲಗೆ—ನಂಗೇನ್ ಯೇಳು! ॥ ೪ ॥

ಮಲ್ಲವ್ವನ್ ನಾನ್ ಮೊದಲ್ ನೋಡಿದ್ ನಂ
ಪ್ಯಾಟೆ ನಲ್ಲೀತಾವ;
ಅವಳ್ಗೂನೂ ಯಿಂಗ್ ಅನ್ನಿಸ್ತಂತೆ:
'ಇವನ್ ಯಾರ್ ಇಂಗ್ ನೋಡಾವ?' ॥ ೫ ॥

ಮಲ್ಲಮ್ಮಂಗೂ ನನ್ ತಂಗೀಗೂ
ನಲ್ಲೀ ನ್ಯಾಸ್ತ ಬಾಳ.
ಮೀನ್ ಇಡದಂಗ್ ನನ್ ಇಡಿದಾಕ್‌ಬುಡ್ತು
ಮಲ್ಲೀ ಎಸದಿದ್ ಗಾಳ. ॥ ೬ ॥

ಮೂರ್ ಉಟ್ಟೋವೆ ಮಕ್ಕಳ್ ನಮ್ಗೆ—
ಗಂಡ್ ಎರಡ್ ಒಂದೇ ಯೆಣ್ಣು.
ಆದ್ರೂ ಮಲ್ಲಿ ನೀರ್ಗೆ ಒಂಟ್ಬಿಂದ್ರೆ—
ಅತ್ತಾಗೇ ನನ್ ಕಣ್ಣು! ‖ ೭ ‖

ನಿಂತ್ರೊಂಚಂದ ಕುಂತ್ರೊಂಚಂದ
ನಡಿತಾನಿದ್ರೊಂಚಂದ!
ಮಲ್ಲಿ ಚೌರ್ಗೆ ಬೆಳಗೋದ್ ಚಂದ!
ನೀರ್ ತುಂಬೋದೂ ಚಂದ! ‖ ೮ ‖

ತುಂಬಿದ್ ಚೌರ್ಗೇನ್ ವೂ ಎತ್ದಂಗೆ
ಸೊಂಟ್ದಾಗ್ ಸಿಕ್ಸೋದ್ ಚಂದ!
ನಿರೀನ್ ಇಂಕ್ರ ನೆನಸದಂಗೇನೇ
ಚಿಮ್ತಾ ಬರೋದೆ ಚಂದ! ‖ ೯ ‖

ನೀರ್ ಎಸ್ಟ್ ವೊತ್ರೂ—ಬಾಬಯ್ಯಾಣೆ—
ತೋಳ್ ತೊಡೆ ನಡಗಾಕಿಲ್ಲ.
ಎರಡನಿ ಬೆವರು ಬಂದ್ರೇನೀಗ—
ಕುಂಕ್ಮ ಕದರಾಕಿಲ್ಲ. ‖ ೧೦ ‖

ನಲ್ಲೀ ತಾವ್ ಯಾರ್ ರಾಂಗ್ ಮಾತಿಲ್ಲ
ಮಲ್ಲೀ ಅಲ್ಲಿರೊಗಂಟ!
ಮರ್ವಾದೀಗ್ ಔಳ್ ಮೇಲ್ ಪಂಕ್ತೀನೆ—
ಮಿಕ್ಕೋರ್ ತಪ್ಸೋಕ್ ಉಂಟ? ‖ ೧೧ ‖

ಮಕ್ಕಳ್ ಬಂದ್ರೆ, ಹಸ ಕರ ಬಂದ್ರೆ,
ಅವಕೇ ಮೊದಲಿನ್ ಪಂಕ್ತಿ.
ಮತ್ ಬರ್ಬೇಕು ಮುದುಕೀರ್ ಪಾಳಿ—
ಇದು ನಂ ಮಲ್ಲೀ ಸಂಗ್ತಿ. ‖ ೧೨ ‖

ನಲ್ಲೀ ನೀರ್ಗೆ ನೂಕ್ನುಗ್ಲುಂಟ?
ಬಾಯ್‌ಜೋರ್, ಮಾಡಾಕ್ ಉಂಟ?
ಸಾಲಾಗ್ ನಿಲ್ಬೇಕ್ ಸಿಪಾಯ್ ನಿಂತಂಗೆ
ಚೌರ್ಗೆ ತುಂಬೋಗಂಟ! ‖ ೧೩ ‖

ನಲ್ಲೀ ನೀರಿಗ್ ಬಂದೋರ್ ಅಲ್–ಇದು
    ಲಾಲ್‌ಬಾಗಿನ್ದು ಪರಿಸೆ !
ಒಂದೇ ಮನೆಯೋರ್ ಬಿಂದ್ಗೆ ತಂದಂಗ್—
    ಅದ್ದು ! ಮಲ್ಲೀ ವರಿಸೆ ! || ೧೪ ||

ಒಂದೊಂದಲ್ಲ ನಲ್ಲೀ ತಾವ್ ನಂ
    ಮಲ್ಲೀ ಆಡೋ ಆಟ
ಬಾಲಾನ್ ಯಾರೂ ಬಿಚೋವಂಗಿಲ್ಲ
    ಮಲ್ಲಮ್ಮನ್ ಸಂಗಾಟ ! || ೧೫ ||

ಮಲ್ಲಮ್ಮ—ನನ್ ಮಕ್ಕಳ್ ತಾಯಿ !
    ಮಲ್ಲೀ—ಔಳ್ ನನ್ ಯೆಂಡ್ರು !
ನಂ ಪ್ಯಾಟೇಗ್ ಔಳೇ ಪಾಳೇಗಾತಿ !
    ಇಂತೌಳನ್ ಯಾರ್ ಕಂಡ್ರು ! || ೧೬ ||

ಅಣ್ಣಮ್ ತಾಯಿ ! ಅಡ್ ಬಿದ್ದೇ—ನನ್
    ಯೆಂಡ್ರು ಮಕ್ಳು ಪ್ಯಾಟಿ
ಚಂದಾಗಿರ್‍ಲಿ—ನೋಡ್ಕೊಳ್ಳವ್ವಾ—
    ನೀನೇ ನಮ್ಗೆ ಕ್ವಾಟಿ ! || ೧೭ ||



ರೇಡಿಯೋ ಹಾಡಿದರೆ ವೈಣಿಕನ ಚಿತ್ರ ಕೂಡ !!

# ಅಜ್ಜಿಯ ಬಡ್ಜೆಟ್ಟು

★ ಕುಮಾರ್ ★

ನನಗೆ ಚೆನ್ನಾಗಿ ಜ್ಞಾಪಕ ಇದೆ. ಅವತ್ತು ಜೀರಿಗೆ ಡಬ್ಬಕ್ಕೆ ಕೈಹಾಕಿ ಕಾಸು ಕದಿಯಲು ಹೊರಟಾಗ ಚೀಟಿ ಕೈಗೆ ಸಿಕ್ಕಿದ್ದು. ಆ ಚೀಟಿಯಲ್ಲಿ ಏನು ಬರೆದಿತ್ತು ಗೊತ್ತೆ? "ಎರಡು ರೂಪಾಯಿ ಸಾಲ ನಂದು". ಸಹಿ ಅಜ್ಜ!

ಹುಡುಗಬುದ್ಧಿ. ಕದಿಯುವುದಕ್ಕೆ ಹೋದರೂ, ದುಡ್ಡು ಸಿಗದಿದ್ದರೂ ಈ ಚೀಟಿಯ ಮರ್ಮ ಏನು ಎಂದು ಅರಿಯಲೇ ಬೇಕು ಎಂದು ಕುತೂಹಲ. ಮನೆಯ ವಹಿವಾಟನ್ನೆಲ್ಲಾ, ಅದರಲ್ಲೂ ಅಜ್ಜ ಅಜ್ಜಿಯ ವಹಿವಾಟನ್ನೆಲ್ಲಾ ಎಚ್ಚೆತ್ತ ಕಣ್ಣಿಂದ ನೋಡಿದೆ.

ಆಹಾ! ಆಗಿನ ಕಾಲದಲ್ಲಿ ಹಣಕಾಸಿನ ವ್ಯವಸ್ಥೆ ಎಷ್ಟು ಚೆನ್ನ ಅಂತೀರಿ! ಎಷ್ಟು ಸುಲಭ ಅಂತೀರಿ?

ಅಜ್ಜ ತಿಂಗಳಾಗುತ್ತಲೂ ತನ್ನ ಪಿಂಚಣಿ ಹಣವನ್ನು, ಎಂದಿನಂತೆ ಅಜ್ಜಿಯ ಕೈಗೆ ಕೊಡುತ್ತಿದ್ದ. ಅಜ್ಜಿ ಜೀರಿಗೆ ಡಬ್ಬದಲ್ಲಿ ಒಂದು ರೂಪಾಯಿ. ಸಾಸುವೆ ಡಬ್ಬದಲ್ಲಿ ಎಂಟಾಣೆ. ತೆಂಗಿನಕಾಯಿ ಚೀಲದಲ್ಲಿ ಒಂದು ರೂಪಾಯಿ. ನೈವೇದ್ಯದ ಡಬ್ಬದಲ್ಲಿ ಒಂದು ರೂಪಾಯಿ. ಕುಂಕುಮದ ಭರಣೀಲಿ ಎರಡು ರೂಪಾಯಿ. ಹೀಗೆ ತಿಂಗಳಿಗೆ ಬೇಕಾದ ಸಾಮಾನಿನ ಡಬ್ಬಗಳಲ್ಲಿ ಅಷ್ಟಷ್ಟು ಹಣವನ್ನು ಅವಳ ಇಷ್ಟದಂತೆ ಇಡುತ್ತಿದ್ದಳು. ಸಾಮಾನು ಮುಗಿದರೆ ಆಯಾ ಡಬ್ಬದಲ್ಲಿದ್ದ ಹಣದಿಂದ ಆ ಡಬ್ಬಕ್ಕೆ ಸಾಮಾನು ತರಿಸಿ ಭರ್ತಿ ಮಾಡುತ್ತಿದ್ದಳು. ಅಜ್ಜನಿಗೆ ತುರ್ತಾಗಿ ರಾತ್ರಿ ಎಂಟು ಗಂಟೆಗೆ ಇಸ್ಪೀಟು ಆಡುವಾಗ ಹಣ ಬೇಕಾದರೆ, ಒಂದು ಡಬ್ಬದಿಂದ ಒಂದು ರೂಪಾಯಿ ತೆಗೆದುಕೊಳ್ಳುವುದು ಅಜ್ಜಿಗೆ ಕಾಣದಂತೆ—ಲೆಕ್ಕಕ್ಕೆ ಲೆಕ್ಕ ಬೇಕಲ್ಲವೇ? "ಒಂದು ರೂಪಾಯಿ ಸಾಲ ನಂದು" ಅಂತ ರುಜು ಹಾಕಿ ಒಂದು ಚೀಟಿ ಡಬ್ಬಕ್ಕೆ ಹಾಕುವುದು.

ಉಗಾದಿ ಹೊತ್ತಿಗೆ ಬಡ್ಜೆಟ್ ಸರಿದೂಗಿಸಬೇಕಲ್ಲವೇ ಒಂದು ಎಕರೆ ಗದ್ದೆಯನ್ನು ಮಾರಿಬಿಟ್ಟು—ಬಂದ ಹಣದಲ್ಲಿ ಈ ಚೀಟಿಗಳನ್ನೆಲ್ಲಾ ವಾಪಸು ಪಡೆಯುವುದು. ಅಜ್ಜೀಗೆ ಅಂತ ಒಂದು ಹೊಸ ಸೀರೆ ತಂದು ಉಗಾದೀಗೆ ಕೊಡು

ವುದು. ಆ ಸಂತೋಷದಲ್ಲಿ ಆ ಮುದುಕಿ ಬಾಯಿ ಬಾಯಿ ಬಿಟ್ಟುಕೊಂಡು ಈ ಹಣ ಹೇಗೆ ಬಂತು ಎಂದು ಕೇಳುವುದನ್ನು ಮರೆಯುತ್ತಿದ್ದಳು. ಮಕ್ಕಳ ತಲೆಮೇಲೆ ಕಲ್ಲು ಹಾಕಿದಿರಾ? ಅವರ ಗೋರಿಗೆ ಮಾರ್ಗ ಮಾಡಿದಿರಾ? ಇಲ್ಲಾ! ಲಂಚ ರುಷುವತ್ತು ಏನಾದರೂ ಉಂಟೇ? ಯಾರ ಮನೆ ಹಾಳು ಮಾಡಿದಿರಿ? ಏನೊಂದೂ ಕೇಳುತ್ತಿದ್ದಿಲ್ಲ. ಸಂಸಾರ ಸುಗಮವಾಗಿ ನಡೆದು ಹೋಗುತ್ತಿತ್ತು.

ಅವರಿಬ್ಬರೂ ಹಾಗೇ ಇದ್ದು, ಹಾಗೇ ಕಣ್ಮುಚ್ಚಿಕೊಂಡರು. ಮಕ್ಕಳೇನೋ ಚೊಂಬಿಗೆ ನಾಮ ಹಚ್ಚಿಕೊಂಡು ಭಿಕ್ಷ ಬೇಡಿದರು ಅನ್ನಿ. ಆದರೆ, ಅದಕ್ಕೆ ದೇವರಲ್ಲವೇ ಹೊಣೆ? ಅಜ್ಜ ಅಜ್ಜಿ ಏನು ಮಾಡುತ್ತಾರೆ? ಅಜ್ಜ ಇಸ್ಪೀಟ್ ಆಡಿದ. ಅಜ್ಜಿ ಹಬ್ಬಕ್ಕೆ ತಪ್ಪದೆ ಹೊಸ ಸೀರೆ ಬೆಂಡೋಲೆ ಇಟ್ಟೇ ಇಟ್ಟಳು. ಸುಖವಾಗೇ ಇದ್ದು ಸುಖವಾಗೇ ಹೋದರು.

*  *  *

ಅಲ್ಲಾ! ಯಾಕೆ ಹೇಳುಕ್ಕೆ ಬಂದೆ ಅಂದರೆ, ಈ ಬಡ್ಜೆಟ್ಟು ಸರಿದೂಗಿಸುಕ್ಕೆ ಯಾಕೆ ಇಷ್ಟು ಕಷ್ಟ ಪಡುತ್ತಾರೆ ಅಂತೀನಿ?

ಕೇಂದ್ರದ ಆರ್ಥಿಕ ಸಚಿವರಾಗಲೀ, ನಮ್ಮವರಾಗಲೀ ಅಜ್ಜಿ ಮಾದರಿ ಅನುಸರಿಸಬಾರದೇ? ಸುಖವಾಗಿರಬಾರದೇ?

——(o)——








# ಕನ್ನಡದ ಚೆಂಡ್‌ದಾಂಡಾಟ

---

ಟೆನ್ನಿಸ್ ಪಂದ್ಯದ ವರದಿ ಕಳಿಸು ಎಂದು ಬಾಯಿ ತಪ್ಪಿ ಕನ್ನಡದ ಭಕ್ತನೊಬ್ಬನಿಗೆ ಸಲಹೆ ಕೊಟ್ಟೆವು. ಅವನ ವರದಿ ಬೊಂಬಾಯಿನಿಂದ:

"ಕನ್ಯೆ ಗಸ್ಸಿ ಹಾಗೂ ಶ್ರೀಮತಿ ಟಾಡ್‌ರವರು ಚೆಂಡ್ ದಾಂಡಾಟವನ್ನು ಹುಮ್ಮಸ್ಸಿನಿಂದ ಆಡ ಹತ್ತಿದರು. ಕನ್ಯೆಯು ಪ್ರೇಮ ಹದಿನೈದು ಆದಳು. ಆಗ ಶ್ರೀಮತಿಯು ಪ್ರೇಮ ಮೂವತ್ತು ಮಾಡಿದಳು. ಕನ್ಯೆಯು ಒಂದು ವೇಗವಾದ ಆಟ ಹೂಡಿ ಪ್ರೇಮವನ್ನು ಮುರಿದಳು. ಹದಿನೈದು, ಮೂವತ್ತು ಆಯಿತು. ಹಿಂಗೈ ಹೊಡೆತ ಹೊಡೆದು ಕನ್ಯೆಯು ಮೂವತ್ತು ಮೂವತ್ತು ಮಾಡಿದಳು. ಶ್ರೀಮತಿಯು ಹೇಗೂ ಪಳಗಿದ ಕೈ. ಕಾಲು ಚಳಕುಮಾಡಿ ಸೇವೆ ಮಾಡಿದಾಗ ನಲ್ವತ್ತು ಮೂವತ್ತು ಆಯಿತು. ಕನ್ಯೆಯು ಜೋರಾಗಿ ಸಮಮಾಡಲು, ಚೆಂಡನ್ನು ಎಕ್ಕಿದಾಗ ಅದು ಬಲೆಗೆ ಬಿದ್ದು ಶ್ರೀಮತಿಯವರೇ ಜಯಶೀಲರಾದರು. ಫಲಿತಾಂಶ ಪ್ರೇಮ—ಒಂದು. ಇದೇ ರೀತಿ ಪ್ರೇಮ ೨—ಪ್ರೇಮ ೩—ಪ್ರೇಮ ೫—ಪ್ರೇಮ ೬. ಕಡೆಗೆ ಪಂದ್ಯವನ್ನೇ "ಪ್ರೇಮ ಆರು" ಲೆಕ್ಕದಿಂದ ಗೆದ್ದರು".

—ಈ ಪ್ರೇಮದ ಪಂದ್ಯವನ್ನು ಇನ್ನೂ ವರದಿಮಾಡಲು ನಮಗೇ ಹೆದರಿಕೆ—ನಾವೇ ನೋ ಇಂಗ್ಲೀಷಿನಲ್ಲೇ ಟೆನ್ನಿಸ್ ಆಡಿ ನೋಡುತ್ತೇವೆ.




ಅರ್ಧ ಕಾಫೀಸ—ಒಂದು ಮನೋವಿಧಾನ

# ಹಲೋ ! ....ನಾನು !....ಶೈಲಜಾ !

ಹಲೋ !....ನಾನು !....ಶೈಲಜಾ !

ಯಾರು ? ಪುಷ್ಪಾನಾ ?....

ಅಲ್ವೇ ! ನಮಗೆ ಹ್ಯಾಗೇ ಗೊತ್ತಾಗಬೇಕು, ಅವರು ನಿನ್ನ ಗಂಡ ಅಂತ? ಊರಲ್ಲಿ ಮದುವೆ ಮಾಡಿಕೊಂಡರೆ ನಮಗೆ ಊಟಹಾಕಿಸಬೇಕಾಗುತ್ತೆ ಅಂತ ಯಾವುದೋ ಹಳ್ಳೀಲಿ ಹೋಗಿ ಹಾರ ಹಾಕಿಸ್ಕೊಂಡಿದ್ದೀಯಾ!....

ನೋಡಮ್ಮ, ನಡೆದದ್ದು ಇಷ್ಟೆ: ಶುಕ್ರವಾರ ಫಸ್ಟ್ ಪೀರೀಯಡ್ ತಾನೇಮ್ಮ, ಇಂಗ್ಲಿಷ್ ಪಾಠ. ಹೊಸ ಮೇಷ್ಟ್ರು ಅಂತ ಗೊತ್ತಾಯ್ತು. ಸ್ವಲ್ಪ ಚಿಡಾಯಿಸೋಣ ಅನ್ನಿಸ್ತು. ನಿನ್ನ ಗಂಡ ನಾವೇನು ಕನಸು ಕಾಣಬೇಕಾಗಿತ್ತೇನೆ?....

ನೋಡಮ್ಮ, ನಡೆದದ್ದು ಇಷ್ಟೇ: ನೆಲನೋಡ್ತಾ ರೂಮೊಳಕ್ಕೆ ಬಂದ್ರು. "ಇದೇನಾ ಸೀನಿಯರ್ ಬಿ.ಎ.,?" ಅಂದ್ರು, ಭೂಮಿತಾಯೀನ. ನಾವು ಆ ತಾಯಿ ಪರವಾಗಿ, ಹೌದು ಸಾರ್ ಅಂದೆವು. ಅವರು ಮೇಜಿನ ಹತ್ತಿರ ಬಂದರೋ ಇಲ್ಲವೋ, ಚಂಪಕಾ ಧಡೀರಂತ ಬಾಗಿಲು ಹಾಕಿಬಿಟ್ಳು....ಅಲ್ಲಮ್ಮಾ, ಹೊರಗಿನ ಗಲಾಟೆ ನಮ್ಮ ಪಾಠಕ್ಕೆ ಅಡ್ಡಿಯಾಗೋದು ಬೇಡ ಅಂತ ನಾವು ಬಾಗಿಲು ಮುಚ್ಚಿದರೆ, ಈ ಮೇಷ್ಟರು ಯಾಕಮ್ಮ ಬೆಚ್ಚಬೇಕು? ಇವರಿಗೆ ಯಾಕೆ ನಡುಕ? ಮತ್ತು ಯಾಕೆ ತೊದಲು ತೊದಲಾಗಬೇಕು?....ನಾವೇನ್ ಮಾಡಿದ್ವಮ್ಮ?....ಒಳ್ಳೇ ಚೆನ್ನಾಯ್ತು....

ಆಯ್ತಾ? ಅವತ್ತು ನಮಗಿದ್ದದ್ದು 'ಪೊಯಿಟ್ರಿ'. ಈ ಮೇಷ್ಟ್ರು ಎಡಗೈನ ನಾಲ್ಕು ಬೆರಳನ್ನೂ ಮಡಿಚಿಕೊಂಡು, ಆ ನಾಲ್ಕು ಬೆರಳಿನ ಉಗುರನ್ನ ಎಡ ಹೆಬ್ಬೆಟ್ಟಿಂದ ಪಾಲೀಸು ಮಾಡ್ತಾ, 'ಡೆವಲಪ್‌ಮೆಂಟ್ ಆಫ್ ಇಂಗ್ಲಿಷ್ ಡ್ರಾಮ' ಅಂತ ಬಾಯಿಗೆ ಬಂದದ್ದು ಒದರುಡೇ ಬಿಡೋದೆ?....ನಾವೇನ್ ಮಾಡ್ಬೇಕು? ಪೊಯಟ್ರಿ ಪುಸ್ತಕ ಇದೆ, ಪಾಠ ಮಾಡ್ತೋಲ್ಲ. ಪಾಠ ಮಾಡ್ತಾ ಇದ್ದಾರೆ; ಅದು ನಮಗಲ್ಲ, ಅವರ ಎಡಗೈ ಬೆರಳಿನ ಉಗುರಿಗೆ!....ಇದ್ಯಾಕೆ ಈ ಮೇಷ್ಟ್ರು ಹೀಗೆ? ಅಂತ ಎಲ್ರೂ ಗಪ್‌ಚಿಪ್ಪಾಗಿ ಅವರನ್ನೇ ನೋಡ್ತಾ ಕೂತುಬಿಟ್ವಿ! ಇದೂ ನಮ್ಮ ತಪ್ಪೇ?....ಇನ್ನೇನು ಮಾಡಬೇಕಾಗಿತ್ತೇ? ತೂಕಡಿಸ್ತಾ ಗೊರಕೆ ಹೊಡೀಬೇಕಾಗಿತ್ತೇನೊ?....ನಿನ್ನ ಗಂಡ ಅಂತ ಗೊತ್ತಾಗಿದ್ದಿದ್ರೆ, 'ನಂ ಪುಷ್ಪಾ ಮೇಲೆ ಒಂದು ಸಣ್ಣ ಲೆಕ್ಚರ್, ಸಾರ್' ಅಂತ ಕೇಳೇಬಿಡ್ತಿದ್ದೆ....

ಅದು ಸರೀಮ್ಮಾ. ನಾವೇನೋ 'ಸ್ಟೇರ್' ಮಾಡ್ತಾ ಇದ್ದದ್ದು ತಪ್ಪೂ ಅಂತ ಬೇಕಾದರೆ ಒಪ್ಪಿಕೊಳ್ಳೋಣ. ಆದರೆ ಅವರು, ನಿಂ ಯಜಮಾನರು, ಲೆಕ್ಚರ್ ಮಾಡ್ತಾ ಮಾಡ್ತಾ, ಮುಕ್ಕಾಲು ಗಂಟೆ ಪಂಜಾಬ್ ಮೈಲ್ ಓಡಿಸಿ, ಥಟಕ್ಕನೆ ತಲೆಯೆತ್ತಿ ನಮ್ಮನ್ನ ಯಾಕಮ್ಮಾ ನೋಡಬೇಕು?....ಹೋಗಲಿ, ನೋಡಲಿ. ನೋಡಿದವರು ಯಾಕಮ್ಮಾ ನಿಷ್ಕಾರಣವಾಗಿ ಮುಖದ ತುಂಬ ಬೆವರು ಬರಿಸಿಕೊಬೇಕು....ಅದೂ ಆಗಲಿ ಅಂದ್ರೆ, ಆ ಅವಾಂತರದಲ್ಲಿ ಮೇಜಿನ ಮೇಲಿನ ಡಸ್ಟರ್ ಯಾಕಮ್ಮಾ ಎತ್ತಿಕೊಬೇಕು?....ನಾವುಗಾನಾ 'ಸಾರ್, ಡಸ್ಟರ್' ಅನ್ನದೆ ಹೋಗಿದ್ರೆ—ಆಗ್ತಿತ್ತು ಆವತ್ತು ಅವರ್ಗೆ, ಮುಖದ ತುಂಬ ಬಿಳೀ ನಾಮ.

ಸದ್ಯ ಅಷ್ಟು ಹೊತ್ಗೆ ಗಂಟೆ ಹೊಡೀತೋ. ಬಚಾವಾದರು ಅನ್ನು....

ಆದರೆ, ನಮ್ಮದೇನೇ ತಪ್ಪು?....ಪಾಠಕ್ಕೆ ಬಂದವರು ಅಟೆಂಡೆನ್ಸ್ ಹಾಕದೆ ಹೋದರೆ ಹ್ಯಾಗೇ?....ಜ್ಞಾಪಿಸಿದೆವು....ಪೆನ್ ತೆಗೆದು, ರಿಜಿಸ್ಟರ್ ಬಿಚ್ಚಿ, ಹೆಸರು ಕೂಗಿದರು....ಅಂಬುಜ....ಅಮ್ಮಯ್ಯ.....ಭಾಗೀರಥಿ....ಪಾಪ, ತಿರಿಗೂ ಬೆವರಿ ಹೋದರು ಕಣೆ....ನಮ್ದೇನೆ ತಪ್ಪು?....ಬೇಕಾದರೆ, ಮುಂದಿನ ವಾರದ ವೇಳೆಗೆ ಪೆನ್ಸಿಲಿನಲ್ಲಿ ಒಂದೊಂದು ಹೆಸರಿನ ಕೊನೆಗೂ ಒಂದೊಂದು 'ಅಮ್ಮ', ಒಂದೊಂದು 'ದೇವಿ', ಒಂದೊಂದು 'ಬಾಯಿ' ಸೇರಿಸೋಣಂತೆ. ಬೇಕಾದರೆ ಒಂದೊಂದರ ಹಿಂದೇನೂ ಒಂದೊಂದು 'ಮಿಸ್ಸು', ಒಂದೊಂದು 'ಕುಮಾರಿ' ಬೇಕಾದರೂ ಸೇರಿಸೋಣ....ನೀ ಹ್ಯಾಗೆ ಹೇಳಿದರೆ ಹಾಗೆ. ಎಷ್ಟಾದರೂ ಅವರು ಮೊದಲು ನಿನಗೆ ಯಜಮಾನರು, ಆಮೇಲೆ ನಮಗೆ ಮೇಸ್ಟರು. ಅವರು ಎಷ್ಟೇ ಆದರೂ ನಿನ್ನ ಕಾಪೀ ರೈಟ್ ಅಲ್ವೇನೆ!....

ಆದರೆ ಪುಷ್ಪಾ! ರಿಜಿಸ್ಟರಿನಲ್ಲಿ ಹೆಸರೆಲ್ಲಾ ಕರೀತಾ....ಹಾಗೋ ಹೀಗೋ ....ಪದ್ಮಿನಿ. ಪಂಕಜ, ಪಾರ್ವತಿ, ಅಂತ ಎಲ್ಲಾ ಕರೆದು....ಬಂದರಮ್ಮಾ, ಬಂದರು ...ನಿನ್ನ ಹೆಸರಿಗೆ....ಬೇಡಾ, ಬೇಡ ಅವರ ಪಾಡು....ಮೂರು ಸಲ ಪು–ಪು–ಪು ಅಂದ್ರು....ಅವರ ಒದ್ದಾಟ ನೋಡಲಾರದೆ ನಾನು 'ಪುಷ್ಪ ಆಬ್ಸೆಂಟ್ ಸಾರ್' ಅಂದೆ....ಆಗ ನಮಗೆ ಅರ್ಥವಾಗಲಿಲ್ಲ, ಅದು ಯಾಕೆ ಹಾಗೆ ಒದ್ದಾಡಿದರು ಅಂತ....

ಹಲ್ಲೋ!....ಹಲ್ಲೋ!....ಪುಷ್ಪಾ! ಅದು ಯಾರೇ ಅದು ನಿನ್ನ ಜೊತೇಲಿ ಈಗ ನಕ್ಕದ್ದು?....

ಏನಂದೆ?....ಮೇಷ್ಟ್ರೆ?....ಅಯ್ಯಯ್ಯೋ?.....ಮುಂದಿನ ವಾರ ಕ್ಲಾಸಿನಲ್ಲಿ ಶೈಲಜಾನ ಪ್ರಶ್ನೆ ಕೇಳ್ತಾರಂತೆ?....ಷಲ್ಲಿ ಮೇಲೇ?....ಅಯ್ಯಯ್ಯೋ....ಗುಡ್ ಬಯ್....ಪುಷ್ಪಾ....ಅಲ್ಲ, ಸಾರ್!....ಅಯ್ಯಯ್ಯೋ?

—ಶೈಲಜಾ.



★ ★

ತಂಪಾಗಿರಲು

ನಾಗಕನ್ನೆಯರು

ಚಂದನ ಮರವನ್ನು

ಅಪ್ಪುತ್ತಾರಂತೆ

ಇದು ನಿಜವೋ ಅಲ್ಲವೋ ತಿಳಿಯದು
ಆದರೆ

ಈಗ ಕನ್ನೆಯರು

ತಂಪಾಗಿರಲು

ಮೈಸೂರು ಶ್ರೀಗಂಧವ

ಸಾಬೂನನ್ನು

ಅಪ್ಪುತ್ತಾರೆ.

★ ★




# ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು


A.ANANTHIAH

# ಪಾತಮ್ಮನ ಸಾಲದ ರೀತಿ

ಶ್ರೀ ಹಾ ★ ರುದ್ರಮ್ಮ

ನಮ್ಮ ಮನೇನೂ ಪಾತಮ್ಮನ ಮನೇನೂ ಅವುಳಿ ಜವುಳಿ; ತೊಗರಿಯೊಳಗೆ ಬೇಳೆ ಇದ್ದ ಹಾಗೆ, ಮೂಗಿನೊಳಗೆ ಹೊಳ್ಳೆ ಇದ್ದ ಹಾಗೆ. ವಾಲಿ ಸುಗ್ರೀವರು ಪಕ್ಕಪಕ್ಕದಲ್ಲೇ ಎರಡು ಕಿಷ್ಕಿಂಧೆಗಳನ್ನು ಕಟ್ಟಿಕೊಂಡು ವಾಸ ಮಾಡಿದ ಹಾಗೆ. ವರಾಂಡ, ಅದರ ಪಕ್ಕಕ್ಕೊಂದು ಚಿಕ್ಕ ರೂಮು, ಅಂಗೈಯಷ್ಟಗಲ ಹಾಲ್, ಅದರಾಚೆ ಆಲದೆಲೆಯಷ್ಟು ಊಟದ ಮನೆ, ತುಲಸೀದಳದಷ್ಟು ದೇವರ ಮನೆ, ಊಟದೆಲೆಯಷ್ಟು ಊಟದ ಕೋಣೆ, ಸೀಮೆ ಎಣ್ಣೆ ಟಿನ್ನಿನಷ್ಟು ಉಗ್ರಾಣ ಇತ್ಯಾದಿ ಇತ್ಯಾದಿ—ಎರಡು ಮನೆಗಳೂ ಒಂದೇ ಅಳತೆ, ಒಂದೇ ಬಾಡಿಗೆ, ಒಂದೇ ತಾಪತ್ರಯ. ಅವರ ಯಜಮಾನರು ಕಂಟ್ರೋಲ್ ಆಫೀಸ್ ಗುಮಾಸ್ತೆ, ಬಿ.ಎ.ಬಿ.ಟಿ., ೪೦ ರೂಪಾಯಿ ಸಂಬಳ, ಹಾಗೂ ಹೀಗೂ ೫೦ ರೂಪಾಯಿ ಮಿಕ್ಕ ಬಾಬ್ತು. ಇವರೂ ಅಷ್ಟೆ....ಬಿ.ಟಿ. ಇಲ್ಲ, ಬಿ.ಎಲ್ಲು. ೪೫ ರೂಪಾಯಿ ವರಮಾನ, ೩೦ ರೂಪಾಯಿ ವರ್ಧಮಾನ, ನನ್ನ ತಂದೆ ಮನಿ ಆರ್ಡರ್ ಮೂಲ್ಕ. ಇಬ್ಬರ ಕಾರ್ಡಲ್ಲೂ ಎರಡು ದೊಡ್ಡೋರು, ಒಂದು ಮಗು. ಇಬ್ಬರೂ ಒಂದೇ ದಿನ ವಾಸಕ್ಕೆ ಬಂದೆವು ನೋಡಿ, ಈ ಮಾರಪ್ಪ ಬ್ಲಾಕ್ಕಿಗೆ.

ನೆರೆಮನೆ ಅಂದರೆ, ಹೀಗೆ ನಾಚಿಕೆ ಬಿಟ್ಟು ಸಾಲ ಕೇಳೋದು ಅಂದ್ರೆ, ಏನ್ರಿ ಇದು ಅನ್ಯಾಯ? ಪಾತಮ್ಮನ ಮಗುವಿಗೆ ಬೇರೆ ಕೆಲಸವೇ ಇಲ್ಲ. ಬೆಳಗ್ಗೆ ಎದ್ದರೆ, ರಂಗೋಲಿ ಪುಡಿ, ಕಾಫಿಪುಡಿ ಸಾಲ; ಒಂಬತ್ತು ಗಂಟೆಗೆ ಉಪ್ಪು; ಹತ್ತು ಗಂಟೆಗೆ ಸಾಸುವೆ; ಊಟ ಮುಗಿಸಾಯಿತು ಅಂದರೆ ಅಡಿಕೆ ಪುಡಿ; ಮಧ್ಯಾಹ್ನವಾಯಿತೆಂದರೆ ಒನಕೆ, ಮೂರು ಗಂಟೆಗೆ ಚಾಕು, ಸಂಜೆಗೆ ಸೀಮೆ ಎಣ್ಣೆ. ರಾತ್ರಿ ಮಂದಳಿಗೆ—ಪೀಡೆ ಅಂದರೆ ಪೀಡೆ. ಯಾರಾದರೂ ನಂಟರು ಬಂದರೆ, ಕಪ್ಪು ಸಾಸರು; ಸ್ನೇಹಿತರು ಬಂದರೆ, ಬೆಂಚು ಕುರ್ಚಿ; ಹುಡುಗಿಯರು ಬಂದರೆ ಹಾರ್ಮೋನಿಯಂ; ತಿಥಿ ಬಂದರೆ ಬೀಸುವ ಕಲ್ಲು ಮೊರ; ನವರಾತ್ರಿ ಬಂದರೆ, ದೇವರ ಪಟ; ಹೀಗೆ ಸಾಲ ಪಡೆಯುವುದು, ಹಿಂದಕ್ಕೆ ತರೋ ಬಾಬ್ತೇ ಇಲ್ಲ.

ಏನೋ ಪಾಪ, ಕೊಟ್ಟದ್ದು ನಮಗೆ, ಬಚ್ಚಿಟ್ಟದ್ದು ಯಾರಿಗೋ ಅಂತ ನನ್ನ ಅಜ್ಜಿ ಹೇಳಿದ್ದನ್ನೇ ಅನುಸರಿಸಿಕೊಂಡು, ನಾನೂ ಮುಖ ಸಿಂಡರಿಸದೆ

ಕೇಳಿದ್ದೆಲ್ಲ ಕೊಡುತ್ತಲೇ ಬಂದೆ. ಅಕ್ಕ ಪಕ್ಕ, ನೆರೆಹೊರೆ ಅನ್ನೋ ಮಮತೆ, ಹಾಳು, ಕಷ್ಟ ಕಾಲಕ್ಕೆ ಜನ ತಾನೆ ಮುಖ್ಯ ಅಂತ. ಮೊನ್ನೆ ಅವರ ಮನೆಗೆ ಯಾರೋ ಬಂದಿದ್ದಾಗ, ಪಾತಮ್ಮನ ತಂಗಿಗೆ ಮದುವೆಗಾಗಿ ವರ ಗೊತ್ತು ಮಾಡೋ ರಭಸದಲ್ಲಿ ವರಸಾಮ್ಯ ಅಂದರೆ ಹೇಗಿರಬೇಕು ಅಂತ ಅವರಿಗೆ ತೋರಿಸೋಕೆ, ನನ್ನ ತಮ್ಮನ ಮದುವೇಲಿ ಅವನೂ ಅವನ ಹೆಂಡತಿ ತೆಗೆಸಿ ಕೊಂಡಿದ್ದ ಫೋಟೋನೂ ಸಾಗಿಸಿದರು. ತಪ್ಪಲೆ, ಸೌಟು, ದೇವರ ದೀಪಾ ರಾಧನೆ ತಟ್ಟೆ, ಗಂಗಾಜಲದ ಚೊಂಬು, ಬಿಸಿ ನೀರು ಹಂಡೆಯಿಂದ ನೀರೆತ್ತುವ ಪಾತ್ರೆ, ಮಗುವಿಗೆ ಹಾಲು ಕೊಡೋ ಸೀಸೆ, ಇವರು ಬೂಟ್ಸು ಹಾಕಿಕೊಳ್ಳೋ ಕಬ್ಬಿಣದ ಚೂರು, ಥರ್ಮಾಸ್ ಫ್ಲಾಸ್ಕು, ನನ್ನ ತುಮಕೂರು ಬಾಚಣಿಗೆ, ನಿಟ್ಟಿಂಗ್ ಸೂಜಿ—ಎಲ್ಲಾನ್ನೂ ಸಾಗಿಸಿಬಿಟ್ಟಿದಾರೆ. ಇನ್ನೂ ಇವಲ್ಲದೆ ನಾನು ಮರೆತು ಹೋಗಿರೋದು ಎಷ್ಟೋ!

ಆಕೆ ಮಗು ಬಂದು ಸಾಲ ಕೇಳಿದಾಗ, ಪೆಚ್ಚಿ, ನಾನು ಕೊಟ್ಟುಬಿಡೋದು, ಆ ಮೇಲೆ ಇವರ ಹತ್ತಿರ ಕೈ ಕೈ ಹಿಸುಕೊಳ್ಳೋದು—ಇದೇ ಆಗಿದೆ ನನ್ನ ಹಣೇ ಬರಹ. ನಿನ್ನೆ ಅವರ ಯಜಮಾನರು ಮಂತ್ರಿಗಳನ್ನು ನೋಡೋಕೆ ಬೆಳಗ್ಗಿನ ಜಾವವೇ ಹೊರಡಬೇಕಾಗಿತ್ತಂತೆ, ರಾಹುಕಾಲಕ್ಕೆ ಮೊದಲೇ! ಮಂತ್ರಿಗಳನ್ನ ಅಂದರೆ, ಮಂತ್ರಿಗಳನ್ನೇ ಅಲ್ಲ. ಮಂತ್ರಿಗಳ ನಂಟರೊಬ್ಬರು ಅವರನ್ನ ಅವರ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತೇನೆ ಅಂತ ಹೇಳಿದ್ದರಂತೆ, ಅವರ ಮನೆಗೆ ಹೋಗಬೇಕಾಗಿತ್ತಂತೆ, ಅದಕ್ಕೆ ನಮ್ಮ ಮನೆ ಅಲಾರಂ ಗಡಿಯಾರವನ್ನು ಹೊತ್ತುಕೊಂಡು ಹೋಗೇಬಿಟ್ಟರು, ಪಾತಮ್ಮನವರು. ಈತನಕ ಅದರ ಮುಖಾನ್ನೇ ಕಾಣೆ.

ಆದರೆ, ಒಂದು ವಿಷಯ ಹೇಳೋದಕ್ಕೆ ಮರೆತುಬಿಟ್ಟೆನಲ್ಲಾ. ನಾನೂ ಸುಮ್ಮನಿರಲಿಲ್ಲ. ಅವರೊಂದು ಸಾಮಾನು ನನ್ನಿಂದ ಸಾಲ ಪಡೆದರೆ, ಮರು ಕ್ಷಣದಲ್ಲೇ ನಾನೂ ಅವರ ಮನೆಯಿಂದ ಅದಕ್ಕೆ ಪ್ರತಿಯಾಗಿ ಒಂದು ಪದಾರ್ಥ ತರಿಸಿಕೊಂಡು, ಅದನ್ನು ಹಿಂತಿರುಗಿಸಲು ಮರೆತುಬಿಡುತ್ತಿದ್ದೆ. ಪಾತಮ್ಮನಿಗೆ ಮಾತ್ರ ಬುರುಡೆಯಲ್ಲಿ ಮೆದುಳು, ನನ್ನ ಬುರುಡೆಯಲ್ಲಿ ಮಣ್ಣು, ಅಂತ ಇದೆ ಯೇನು? ಹೀಗಾಗಿ, ನಮ್ಮ ಮನೆ ಕುರ್ಚಿ ಮೇಜು ಅವರ ಮನೆಯಲ್ಲಿ; ಅವರ ಮನೆ ಈಸಿಚೆಯರು, ಗುಂಡು ಮೇಜು ನನ್ನ ಮನೇಲಿ! ನಮ್ಮ ಮನೆ ಪುಸ್ತಕ ಗಳು ಅವರ ಮನೆಯಲ್ಲಿ, ಅವರದೆಲ್ಲ ಇಲ್ಲಿ! ನಮ್ಮ ಅಲಾರಂ ಗಡಿಯಾರ ಅವರ ಮನೆಯಲ್ಲಿ, ಅವಳ ಯಜಮಾನರ ಕೈಗಡಿಯಾರ ಇವರ ಕೈಯಲ್ಲಿ! ಅವಳ ತಂಗಿ ಮದುವೇಲಿ ತೆಗೆಸಿದ ಫೋಟೋ ನಮ್ಮ ಮನೆ ಗೋಡೇಲಿ; ಅವರ ಗೋಂದಿನ ಡಬ್ಬ, ಸೂಜಿ ದಾರ, ಇಜ್ಜಿಲೊಲೆ, ಹೊಳಿಲೆ, ಕಾಡಿಗೆ ಬಟ್ಟಲು, ಆರತಿ ತಟ್ಟೆ—ಎಲ್ಲ ನನ್ನ ವಶದಲ್ಲಿ.

ಇವತ್ತು ಬೆಳಗ್ಗೆ ಇವರ ಹತ್ತಿರ ಪಾತಮ್ಮನ ಸಮಸ್ಯೆಯನ್ನು ವಿವರಿಸಿದೆ. “ಕಿಂ ಕರ್ತವ್ಯಂ” ಎಂದು ಇಬ್ಬರೂ ಚರ್ಚಿಸಿದೆವು. ಕಡೆಗೆ, ಇವರಂದರು; ಅವರು ನಮ್ಮ ಸಾಮಾನನ್ನು ತರುವುದು ಬೇಡ, ನಾವು ಅವರ ಪದಾರ್ಥಗಳನ್ನು ಹಿಂದಕ್ಕೆ ಕೊಡುವುದೂ ಬೇಡ. ನಾಳೆ ಹೇಗಿದ್ದರೂ ತಿಂಗಳ ಮೊದಲನೆಯ ದಿನ. ನಾವು ಪಕ್ಕದ ಮನೆಗೆ ಹೊರಟು, ಅಲ್ಲೇ ಬಾಡಿಗೆಗಿರೋಣ; ಅವರು ಈ ಪಕ್ಕಕ್ಕೆ ಬಂದುಬಿಡಲಿ, ಅಂದರು.

ಪಾತಮ್ಮನ ಗಂಡ ಇದಕ್ಕೊಪ್ಪಿದಾನೆ. ಫಸ್ಟಿಗೆ ಆ ಕಡೆ ಹೋಗುತ್ತೇವೆ. ಇನ್ನೊಂದು ಮೂರು ತಿಂಗಳು ಆದ ನಂತರ, ಮತ್ತೆ ನಾವು ಇದೇ ಮನೆಗೆ ಬರಬಹುದು ಅಂತ ತೋರುತ್ತೆ. ಪಾತಮ್ಮ ಆಗ ಅವಳ ಈಗಿನ ಮನೆಗೆ ಬದಲಾಯಿಸಬಹುದು. ಹೀಗೆ, ಅತ್ತಲಿಂದಿತ್ತಲೂ, ಇತ್ತಲಿಂದತ್ತಲೂ, ನೆಗೆಯುತ್ತಾ ಇರುವುದೇ, ನಮ್ಮ ನಮ್ಮ ಸಾಲದ ಮಹತ್ವ.

——o——



# ಮೋಹನ ವಾಹನ

ಕಾರು ಹೋಯಿತು ಧೂಳನೆಬ್ಬಿಸಿ
ಒಡೆಯ ಧನಿಕನ ಮನವನುಬ್ಬಿಸಿ;
ಕಣ್ಣನರಳಿಸಿ ಸಣ್ಣ ಶಿಶುಗಳು
(ಕುಚ್ಚು ಬಾಲವನೆತ್ತಿ ಪಶುಗಳು—
ಅತ್ತನೋಡುತ ಬೆದರಿ ಚೆದುರುತ
ಎತ್ತ ಬಂತೀ ಭೂತ—ಬೆದರುತ—)
ಅಪ್ಪ! ನಮಗೂ ಬೇಕು, ವಾಹನ!
ಅಮ್ಮ! ಇಂಥ ಗಾಡಿ, ಮೋಹನ!
ಬಡವರೆಂದರೆ ಏನು ನಾಚಿಕೆ
ನಮ್ಮ ಬಾಳೇ ತೀರ ಹೇಸಿಗೆ!
ಅವರ ಮನೆಯಲಿ ಹುಡುಗರೆಲ್ಲರು
ನಡೆದು ಶಾಲೆಗೆ ಹೋಗಲೊಲ್ಲರು.
"ಅಪ್ಪನೇತಕೆ ಅವರ ತಂದೆಗೆ
ಸಮದ ದುಡಿತಕೆ, ಬಿದ್ದ ಹಿಂದಕೆ?
ನೀನು ಬೆಳೆದಿಹೆ ಮೀಸೆ ಬೆಳೆಸಿಹೆ
ಶುಷ್ಕ ಜಂಬದ ಹರಟೆ ಬೆಳೆಸುವೆ!"
ಸುತರು ಸುತೆಯರು ಜರಿಯೆ ತಂದೆಯು
ಅಳುತ ಹೀಯಾಳಿಸಲು ಮುಂದೆಯೆ,
ಅವರ ಕಣ್ಣಲಿ ಸುಣ್ಣ ಬೀಳಲು
ಅವರ ಹೃದಯವು ರೋಷ ತಾಳಲು
ಕಾರು ಹೋಯಿತು, ಧೂಳನೆಬ್ಬಿಸಿ

ಒಡೆಯ ಧನಿಕನ ಮನವನುಬ್ಬಿಸಿ.

**ಪಾಟಾಳಿ.**

---

# ಪತ್ತೇದಾರಿಯೋ ಪ್ರಾಣ ಸಂಕಟವೋ?



[S. N. Qutb ಅವರ Elementary ! my dear Watson ಆಧಾರದ ಮೇಲೆ]

ಹತ್ತು ರೂಪಾಯಿನ ನೋಟನ್ನು ಜೇಬಿನಲ್ಲಿಟ್ಟುಕೊಂಡಿದ್ದು ಚೆನ್ನಾಗಿ ಜ್ಞಾಪಕವಿದೆ. ಆದರೆ ಮಧ್ಯಾಹ್ನ ೧೧ ರಿಂದ ೧ ಘಂಟೆಯೊಳಗೆ ಪುನಃ ನೋಡಿದಾಗ ಅದು ಮಾಯವಾಗಿತ್ತು. ಅದನ್ನು ನನ್ನ ಧರ್ಮ ಪೂತನಿ ಮುಂದೆ ಬಾಯಿಬಿಟ್ಟರೆ, ಇಲ್ದಿ ಇದ್ದ ರಾಮಾಯಣ, ಭಾರತ, ಭಾಗವತಗಳ ಪುರಾಣಮಾಡಿ ನನ್ನನ್ನು ಅದ್ದಿ ಎತ್ತಿ, ಕೆಲವು ಸಾರಿ ಮುಳುಗಿಸಿ ಉಸಿರು ಸಿಕ್ಕಿಸುವ ಭೀತಿ ನನ್ನನ್ನು ಬಾಧಿಸಿದ್ದರಿಂದ ಬಾಯಿಬಿಡಲು ಹೆದರಿದೆ.

"ಇದ್ದೋರು ಮೂರು ಜನದಲ್ಲಿ ಕದ್ದೋರು ಯಾರು?" ಅಂತ ಯೋಚಿಸಿದೆ. ಯಾರು? ನಾನಂತೂ ಅಲ್ಲ. ಖಂಡಿತವಾಗಿ ಅಲ್ಲ. ನನ್ನ ಹೆಂಡತಿ ಹಿಡಂಬಿಯಾದರೂ ಹೇಳದೆ ಹಾರಿಸುವ ಹವ್ಯಾಸದವಳಲ್ಲ. ಉಳಿದವ ಬೋರ. ಅವನು ಕಳ್ಳನೆ? ಎಂದಿಗೂ ಅಲ್ಲ! ಇದುವರೆಗೆ ಪಾಪ ಪ್ರಾಣಿ, ಒಂದು ಐಬಿಗೂ ಆಸ್ಪದ ಕೊಟ್ಟಿಲ್ಲ. ಅವನೇ ಏಕೆ ಹಾರಿಸಿರಬಾರದು? ಇಷ್ಟು ದಿವಸವೂ ಅವನು ಹಾರಿಸುತ್ತಿರಬಹುದು. ಜಮಾ ಖರ್ಚು ಜಾತಾ ಬಾಕಿ ಲೆಕ್ಕಾಚಾರ ಯಾರು ನೋಡುತ್ತಿದ್ದರು? ನನಗೆ ಚೆನ್ನಾಗಿ ಜ್ಞಾಪಕ ಇದೆ. ಕೋಟಿನ ಜೇಬಿನಲ್ಲೆ ಇತ್ತು, ಆ ಹತ್ತು ರೂಪಾಯಿನ ನೋಟು. ಇರಲಿ, ಇಂದು ಪತ್ತೆ ಹಚ್ಚಲೇಬೇಕು ಎಂದು ನಿರ್ಧರಿಸಿದೆ.

ಇದಕ್ಕೇನು ಉಪಾಯ? ಅದೇ ಕೋಟಿನ ಅದೇ ಜೇಬಿನಲ್ಲಿ ತಿರುಗಿ ಹತ್ತು ರೂಪಾಯಿನ ನೋಟಿಟ್ಟು ಮಲಗಿದೆ. ಎದ್ದು ನೋಡಲು ಅದೂ ಮಾಯ! ಅದ್ಯಾವ ಮಾಯದಲ್ಲಿ ಬಂದು ಹಾರಿಸಿದ್ದನೋ ಆ ಕದೀಮ, ದೇವರಿಗೇ ಗೊತ್ತು. ಇರ್ಲಾರ್ದೆ ಇನ್ನೊಂದ್ನೋಟ್ನ ಆಹುತಿ ಕೊಟ್ನಲ್ಲ ಕಮಂಗಿ ಹಾಗೆ ಅಂದ್ಕೊಂಡೆ.

ಇನ್ನೇನು ಉಪಾಯ ಎಂದು ಯೋಚಿಸಿದೆ. ಬೇರೆ ಏನೂ ಕಾಣಲಿಲ್ಲ. ಸರಿ, ಇನ್ನೂ ಒಂದು ನೋಟು ತೆಗೆದು ಹಾಗೆ ಇಟ್ಟು, ಒಂದು ಘಂಟೆ ಆದ ಮೇಲೆ "ಅಲಾರಂ" ಹೊಡೆದುಕೊಳ್ಳುವಂತೆ ಅಲಾರಂ ಸೆಟ್ ಮಾಡಿ ಮಲಗಿದೆ

ವುಲಗಿ ಒಂದು ಘಂಟೆಯಾದರೂ ಆದ ಮೇಲೆ ಕಳ್ಳ ಬರುವುದು. ಆಗ "ಅಲಾರಂ" ಹೊಡೆದುಕೊಳ್ಳುವುದು. ನಾನು ಎದ್ದು ಆತನ ಮೇಲೆ ಹಾರಿ ಹಿಡಿಯುವುದು. "ಪೋಲೀಸ್" ಕಂಪ್ಲೈಂಟ್ ಅಂದಾಗ ಆತ ಬೆದರಿ ಬೆಂಡಾಗಿ ಬೇಕೂಫನಾಗಿ, ಕದ್ದ ದುಡ್ಡಿನ ಎರಡರಷ್ಟು ಮಡಗಿ ಬಚಾವ್‌ಗೆ ಬಾಯ್ಬಾಯ್ ಬಿಡುತ್ತಾನೆ. ಬಿಟ್ಟರೆ ಇನ್ನೊಂದ್ಸಾರಿ ಕದ್ಯೊಲ್ಲ. ನನಗೂ ಲಾಭ ಅಂತ ನನ್ನ ಊಹೆ. ಅದೇ ಪ್ರಕಾರ ಅಲಾರಂ ಹೊಡೆದೆಬ್ಬಿಸಿತು. ಆದರೆ ಕಳ್ಳ ಎಲ್ಲಿ? ಬರಲೇ ಇಲ್ಲ. ನೋಟೂ ಹಾಗೇ ಇತ್ತು. ಇನ್ನೇನು ಬರುವ ಹೊತ್ತೊ ಏನೋ ಎಂದು ಅನುಮಾನ ಭಾವಿಸತೊಡಗಿತು. ಒಂದು ಹೊಸ ಉಪಾಯವೂ ಹೊಳೆಯಿತು. ಎದ್ದು ಒಂದು ಕರೀ ದಾರ ಆ ನೋಟಿಗೆ ಕಟ್ಟಿ ಅದನ್ನು ಕೋಟಿನ ಗುಂಡಿಗೆ ಕಟ್ಟಿದೆ. ಬಚ್ಚಲು ಮನೆಗೆ ಹೋಗಿ ಬಾಗಿಲು ಹಾಕಿಕೊಂಡು, ಅಲ್ಲಿನ ಕಂಡಿಯಿಂದ ನೋಡತೊಡಗಿದೆ. ನನ್ನ ಕಿವಿಗೆ ಕಾಲ ಸಪ್ಪಳ ಕೇಳಬಂತು. ಇನ್ನೇನು ಬರುತ್ತಿರಬಹುದೆಂದು ಸರಿಯಾಗಿ ನೋಡ ತೊಡಗಿದೆ. "ಅರೆ! ನನ್ನ ಹೆಂಡತಿ! ಇದೇನು ಸೀದಾ ಹೋಗಿ ಜೇಬಿಗೆ ಕೈ ಹಾಕಿದಳು. ಆಶ್ಚರ್ಯವಾಯಿತು. ಹುಂ! ಎಂಥಾ ಕಳ್ಳತನ. ನನ್ನ ಹೆಂಡತಿ ಹೀಗೆ ಎಂತ ಗ್ರಹಿಸಿರಲಿಲ್ಲ. ಇನ್ನು ಮೇಲೆ ಹೀಗೆ ಮಾಡದ ಹಾಗೆ ಬುದ್ಧಿ ಕಲಿಸಬೇಕೆನ್ನಿಸಿತು.

"ಅಷ್ಟೊತ್ತಿಂದ ಏನ್ಮಾಡ್ತಾ ಇದ್ದೀರಾ? ಒಳಗ್ಸೇರ್ಕೊಂಡು" ಜೇಬಿಗೆ ಕೈಹಾಕಿ ಅದೇನೋ ಮಾಡುತ್ತಾ ಅರಚಿದಳು.

"ಏಕೆ?" ಎಂದೆ. ಆ ಕಂಡಿಯಿಂದ ದೂರಸರಿದು.

"ಏನು? ನೀರಿಲ್ದೆ ಸ್ನಾನ ಮಾಡ್ತಿದ್ದೀರಾ ಹೇಗೆ? ಒಂದು ಚೊಂಬೂ ನೀರು ಹಾಕ್ಕೊಂಡಂತೆ ಕೇಳಸ್ಲಿಲ್ಲ".

"ಇಲ್ಲ....ಇಲ್ಲ....ಕ್ಷೌರ ಮಾಡ್ಕೊತಿದೀನಿ". ಸರಿ, ಎರಡು ಚೊಂಬು ನೀರು ಚೆಲ್ಲಿದಂತೆ ಮಾಡಿ, ತಲೆ ನೆನೆಸಿಕೊಂಡು ಟವಲಿನಲ್ಲಿ ತೀಡುತ್ತಾ ಹೊರ ಬಿದ್ದು ಜೇಬಿಗೆ ಕೈಹಾಕಿದೆ. ನೋಟು ಮಾಯವಾಗಿತ್ತು. ಕಳ್ಳತನ ಪತ್ತೆ ಯಾಗಿತ್ತು.

"ಏನು ರೇಜರ್‌ನಲ್ಲಿ ಬ್ಲೇಡಿತ್ತೇನು?" ನಗುತ್ತಿದ್ದಳು. ಕಳ್ಳತನ ಮಾಡಿ ಮರೆಮಾಚುವ ನಗೆ ಅದು. ಬೇಲೀನೆ ಎದ್ದು ಕೋಟನ್ನುಂಗಿದ್ರೆ, ಏನ್ಮಾನೇ ಮಾಡ್ಬೇಕು ಹೇಳ. ಗಲ್ಲ ಮುಟ್ಟಿ ನೋಡಿಕೊಂಡೆ. ನಿಜವಾಗಿಯೂ ಅಂದು ಕ್ಷೌರ ಮಾಡಿಕೊಳ್ಳಬೇಕಾಗಿತ್ತು.

"ಇಲ್ಲ....ಇಲ್ಲ....ಬ್ಲೇಡು ಹಾಳು ಮೊಂಡಾಗಿತ್ತು".

"ಅಂದ್ರೆ. ರೇಜರ್, ಬ್ಲೇಡು, ಬ್ರೆಶ್ಶು, ಶೇವಿಂಗ್ ಸ್ಟಿಕ್ ಎಲ್ಲಾ ಇಲ್ಲೇ ಇದ್ವಲ್ಲಾ, ಅದ್ಹೇಗೆ ಮಾಡ್ಕೊಂಡ್ರಿ?"

"ಅದ್ಹೇಗೋ ಅದೆಲ್ಲಾ ನಿಂಗ್ಯಾಕೆ".

"ಅದ್ಯಾಕೆ ಹಾಗ್ರೇಗ್ತೀರಾ? ಕೇಳಿದ್ದೆ ತಪ್ಪೆ!"

"ಹೌದು ತಪ್ಪು"

"ತಪ್ಪಂತೆ ತಪ್ಪು! ಒಹೊಹೋ, ಬಂದ್ರಿ ದಾರಿಗ್ಸರ್ರ್ಯಾಗಿಲ್ಲ. ಏನೊಂತಿದ್ದೆ. ಅಲ್ಲ ಆ ನೋಟಿಗ್ಯಾಕ್ದಾರ ಕಟ್ಟಿದ್ರಿ."

"ಮಣ್ಣಿನ್ನೋಕೆ"

"ತಿಂದಾಯ್ತು?"

"ಹುಂ! ತಿಂದಾಯ್ತು. ಇಲ್ನೋಡು ಲೀಲಾ ಮಾತು ಬಹಳ ಉಚಾಯಿಸ್ತಾ ಇದೆ. ಇದೆಲ್ಲಾ ಚೆನ್ನಾಗಿರೋಲ್ಲ. ಬೇಕಾದ್ರೆ ಕೇಳಿದ್ರೆ ಕೊಡ್ತಾ ಇರ್ಲಿಲ್ವೆ".

"ಚೆನ್ನಾಯ್ತು ಬಿಡಿ. ಅಲ್ಲ! ನೋಟಿಗೆ ಧಾರ ಏಕ್ಕಟ್ಟಿದ್ರಿ ಅಂತ್ಕೇಳಿದ್ದೆ ತಪ್ಪೆ. ನಿಮ್ನೋಟು ನಿಂಪರ್ಸ್ನಲ್ಲೇ ಇದೆ. ನೋಡಿ ಮಾಡಿ ಮಾತಾಡ್ಬೇಕು ಯಾವಾಗ್ಲೂ"

"ನಿನ್ನೆ ಮೊನ್ನೆ ನೋಟಿಲ್ಲೋ! ದರೋಡೆ ಮಾಡೋದು ಅಲ್ದೆ ನೋಡಿ ಮಾಡಿ ಮಾತಾಡ್ಬೇಕಂತೆ"

"ಇದೀಗ ಸರಿ! ಪರ್ಸ್ ಇದ್ದಾಗೆ, ಜೇಬ್ನಲ್ಯಾಕಿಡ್ಬೇಕು. ಎಲ್ಲೋ ಮರ್ತಿಟ್ಟಿರಬೇಕು ಅಂತ ಮೂರ್ದಿವಸದಿಂದ ತೆಗೆದು ಪರ್ಸ್‌ನಲ್ಹಾಕ್ತಿದ್ರೆ, ಅದ್ಹಾಗೆ ನಿಮ್ಗೆ. ಅದೂ ಅಲ್ದೆ ಇವತ್ತು ದಾರಾಯಾಗ್ಕಟ್ಟಿದ್ರಿ? ನಿಮ್ಗೇನು ಬುದ್ಧಿಗಿದ್ದಿ ನೆಟ್ಟಗಿದ್ಯೋ ಇಲ್ವೋ—ಇಲ್ಲ ಹುಚ್ಚೊ!"

ಅಂದ್ಹಾಗೆ ಪರ್ಸ್ ನೋಡೇ ಇರ್ಲಿಲ್ಲ ನಾನು ಪೆಚ್ಚಾದೆ.

"ಹ್ಹೆ! ಹ್ಹೆ! ಹ್ಹೆ! ಸುಮ್ನೆ ನೋಡೋಣಾಂತ" ಅಂತ ಐಬುಮುಚ್ಚಲು ಪ್ರಯತ್ನಿಸಿದೆ. ಆದರೂ ಆಕೆ ಪತ್ತೆ ಹಚ್ಚಿದಳು.

"ದರೋಡೆಯಂತೆ ದರೋಡೆ" ಎಂದು ಹುಬ್ಬುಗಂಟಿಕ್ಕಿಕೊಂಡು, ಕಾಫಿ ಕುಕ್ಕಿ "ದುಂ" ಎಂದು ಬಾಗಿಲು ಬಡಿದುಕೊಂಡು, ಅಡಿಗೆ ಮನೆಗೆ ಹಾರಿದಳು ....ಸರಿ ಶಮನಾರ್ಥಿಯಾಗಿ ಜವಳಿ ಅಂಗಡಿ ಕಡೆ ನಾನು ಕಾಫಿ ಬಿಸಿದುಕೊಂಡು ಹಾರಿದೆ.

—ರಾಮ್ಸ್ವಾಮಿ.

# ಇಲ್ಲ ಇಲ್ಲ

ಸ್ವಾಮಿ! ಮೊನ್ನೆ ಬೆಳಗಾಗಿ ಸೂರ್ಯ ತೆಂಗಿನಮರದ ಎತ್ತರ ಏರುತ್ತಲೂ ನಾನು ನಮ್ಮೂರು ರೇಷ್ವೆ ಷಾಪಿಗೆ ಬೆನ್ನಿಗೆ ಹೊಟ್ಟೆ ಅಂಟಸಿಕೊಂಡು, ಓ ಲಕ್ಷ್ಮಣಾ ಅಂತ ಹೋದೆ. ಸುಳ್ಳು ಯಾಕೆ ಹೇಳಬೇಕು, ನಾನು ನಿಮ್ಮಂಥ ಗ್ರಾಸ್ತರ ಹತ್ರ? ಒಳಗೆ ಕೂತಿದ್ದನಲ್ಲಾ, ಅವಯ್ಯ, ಅವರನ್ನ ಏಯ್ ಅಂತ ಕೂಗಿದೆ; ತಿರುಗಿದ. "ಅಕ್ಕಿ ಇದೆಯೇನು ಒಸಿ" ಅಂತ ಕೇಳಿದೆ. ಇಲ್ಲ, ಅಂದ್ರು. ಜೋಳ, ಅಂದೆ. ತಲೆ ಆಡಿಸಿದರು. ರಾಗೀಂದೆ, ಅದಕ್ಕೂ ಅಲ್ಲಾಡಿಸಿದರು. ಸಕ್ಕರೆ ಅಂದೆ, ಊಹುಂ ಅಂದರು. ಇನ್ನೇನಿದೆ, ಅಂತ ಕೈ ಮುಗಿದು ಬೇಡಿಕೊಂಡೆ. ಏನೂ ಇಲ್ಲ ಕಣಪ್ಪ, ಅಂತ ಬಾಯಿಬಿಟ್ಟು, ನಾಚಿಕೆ ಬಿಟ್ಟು ಹೇಳೀ ಬಿಟ್ಟ. ಆಗ ನಾನಂದೆ, ಅಂದದ್ದನ್ನು ಯಾಕೆ ಇಲ್ಲ ಅನ್ನಲಿ, "ಹಾಗಾದರೆ, ನೀವು ಯಾಕೆ ಬಾಗಿಲು ಹಾಕಿಕೊಂಡು ಹೋಗಬಾರದು?" ಅಂತ. ಅದಕ್ಕವರು, "ಅದೂ ಇಲ್ಲ ಕಣಪ್ಪ" ಅಂದರು. "ಯಾವುದು?" ಅಂತ ಕೇಳೀ ಬಿಟ್ಟೆ. ಆಗ ಅವರು, "ಬಾಗಿಲು" ಅಂದರು.



ಇಲ್ಲಿ ಯಾರನ್ನಪ್ಪ, ನಾನು ಕೇಳಬೇಕಾದ್ದು?

# ಮುದುಕನ ಹಟ

 

ಗಂಗಾಧರ

## ಕಿರು ನಾಟಕ

[ನಾರಣಪ್ಪನವರು ರಿಟೈರಾದ ಪ್ರೈಮರಿ ಸ್ಕೂಲ್ ಉಪಾಧ್ಯಾಯರು. ಒಬ್ಬಳೇ ಮಗಳು. ಗಂಡು ಮಕ್ಕಳಿಲ್ಲ. ಅಳಿಯನ ಮನೆಯಲ್ಲಿ ವಾಸ. ಆತನಿಗೆ ಬಸ್ ಆಫೀಸೊಂದರಲ್ಲಿ ಗುಮಾಸ್ತೆ ಕೆಲಸ. ಕೇವಲ ಬಡತನ. ಮನೆ ತುಂಬ ಹರಕು ಮುರುಕು. ಪರದೆ ಏಳುವಾಗ ರಾತ್ರಿ ಎಂಟು ಗಂಟೆ. ನಾರಣಪ್ಪನವರು ಬಾಯಿಗೆ ಎಲೆ ಅಡಿಕೆ ತುರುಕಿಕೊಳ್ಳುತ್ತಿದಾರೆ. ಅವರ ಅಳಿಯ, ಹರಿದುಹೋದ ಕಾಕಿ ಕೋಟನ್ನು ಹೊಲಿಯುತ್ತಿದಾರೆ. ರಂಗಸ್ಥಳದ ಬಲಭಾಗದಲ್ಲಿನ ಬಾಗಿಲಲ್ಲಿ ಮಗಳು, ಭೀಮಿ ಕಾಣಿಸಿಕೊಳ್ಳುತ್ತಿದಾಳೆ. ಆಕೆ ವಯಸ್ಸು ಸುಮಾರು ೩೦; ಕಷ್ಟ ಸಹಿಸಿ ಕದನ್ನ ತಿಂದು ಕಲ್ಲಾಗಿದಾಳೆ.]

**ನಾರಣಪ್ಪ**—ಹೀಗೆ....ಹಟ ಹಿಡಿಯಬೇಡ, ಭೀಮಿ.

**ಭೀಮಿ**—(ತಲೆ ಅಲ್ಲಾಡಿಸುತ್ತ, ತಂದೆಯ ಹತ್ತಿರ ಬಂದು) ನೀನು ಎಷ್ಟು ಬೇಡಿಕೊಂಡರೂ ಅಷ್ಟೆ; ಅನ್ನೇ ನಾನು ಹೇಳೋದು....ದಿನಾಲು ರಾತ್ರಿ ನೀನು ಅದಕ್ಕೆ ಕತೆ ಹೇಳಿ ಹೇಳಿ ಕೆಟ್ಟ ಚಟ ಕಲಿಸಿಬಿಟ್ಟಿದೀಯಾ! ನಿನ್ನ ಕತೆ ಕೇಳದೆ ಹೋದರೆ, ನಿದ್ದೆ ಮಾಡೋದಿಲ್ಲ ಅಂತಾನಲ್ಲಾ, ಮಗು....ಹಟ ನನ್ನದೋ, ನಿನ್ನದೋ, ಆ ಕೂಸಿನದೋ? ಯಾವತ್ತೂ ಶಾಶ್ವತವಾಗಿ ಅದಕ್ಕೆ ಇಲ್ಲಿ ಕತೆ ಹೇಳೋಕೆ ಪುರಸತ್ತು ಯಾರಿಗೆ....?

**ನಾರಣಪ್ಪ**—(ಅಡ್ಡ ಬಂದು) ಯಾವತ್ತೂ ಶಾಶ್ವತವಾಗಿ ನಾನಿರುವುದಿಲ್ಲ ಗೊತ್ತು ....ನಾನು ಹಾಸಿಗೆ ಹಿಡಿದು ನನ್ನ ನಾಲಗೆ ಕುಸಿದಾಗ, ಕತೆ ಹೇಳೋದನ್ನ ನಿಲ್ಲಿಸಿಬಿಡೋಣವಂತೆ....

**ಭೀಮಿ**—ಆ ಮಾತೆಲ್ಲ ಈಗ್ಯಾಕಪ್ಪ? ಹುಡುಗನಿಗೂ ಒಳ್ಳೇದಲ್ಲಾ....ಒಂದು ದಿನ ತಪ್ಪದೆ ಕತೆ ಕತೆ ಅಂತ ಕಿವಿ ಅಡಿಸುತ್ತಿರೋದು....ಥೂ....ಏನು ಕಥೆಯೋ, ಮುಗಿಯದ ಕಥೆ?

**ನಾರಣಪ್ಪ**—ಮಹಾಭಾರತದ್ದು, ಕಣೆ.

**ಭೀಮಿ** ಮಹಾಭಾರತವ್ರೋ ಈಗ? ರಾಮಾಯಣ ಮುಗಿಯಿತೋ? ಆವಾಯಿತು ಅಂದ್ರೆ ಇನ್ನೊಂದು ತೆಗೀತಿ, ನಿನಗೇನು?....ಒದ್ದಾಡುವವರು ನಾವು ತಾನೆ?

**ನಾರಣಪ್ಪ** ನೋಡು ಭೀಮಿ! ಮೊದಲು ತಾತನ ಹತ್ರ ಹೋಗು, ಕತೆ ಹೇಳು ತ್ತಾನೆ. ಕೇಳ್ತಾ ಕೇಳ್ತಾ ತಾತನ ತೊಡೆಯ ಮೇಲೆ ನಿದ್ದೆಮಾಡು, ಅಂತ ಮಗೂನ ಕಳಿಸ್ತಿದ್ದದ್ದೂ ನೀನೇ....ಈಗ, ಕೆಟ್ಟ ಚಟ ರೂಢಿಯಾಗಿ ಬಿಟ್ಟರೆ ಕಷ್ಟ ಅಂತ ಅವನನ್ನ ತೊಡೆಯ ಮೇಲಿಂದ ಎಳೆದುಕೊಂಡು ಆ ರೂಮಲ್ಲಿ ಮಲಗಿಸಿದ್ದೂ ನೀನೇ....

**ಅಳಿಯ**—(ಹೊಲಿಗೆ ನಿಲ್ಲಿಸಿ) ಮಗೂನ ಕರೆದುಕೊಂಡು ಬಂದು ತಾತನ ಹತ್ರ ಕೂರಿಸಬಾರದೆ, ಭೀಮಿ?

**ಭೀಮಿ**—ನೀವು ಬಾಯಿಮುಚ್ಚಿಕೊಂಡು ಬಟ್ಟೆ ಹೊಲೆಯಿರಿ....ನಾನು ಹೇಳು ವುದು ಆ ಹುಡುಗನ ಒಳ್ಳೆಯದಕ್ಕೇನೆ....ನಮ್ಮಿಬ್ಬರ ಜಗಳಕ್ಕೆ ನೀವು ಬಾಯಿ ಹಾಕಬೇಡಿ....ಹತ್ತು ಸಲ ಒಂದು ಮಾತನ್ನ ಒಬ್ಬರು ಒತ್ತಿ ಒತ್ತಿ ಆಡಿದರೆ, ಅದು ಸರಿ ಅಂದು ಬಿಡ್ತೀರಿ ನೀವು....ಹೂವಿನಂಥ ಹೃದಯ ನಿಮ್ಮದು, ನಾ ಕಾಣೆನೇ?

**ಅಳಿಯ**—ಮುದುಕರು, ಪಾಪ! ವಾತ್ಸಲ್ಯ....

**ಭೀಮಿ**—ಗೊತ್ತು ಗೊತ್ತು. ಅವನೊಬ್ಬ ಮುದುಕ, ನೀವೊಬ್ಬರು ಗಂಡಸರು, ಮಗೂನೂ ಗಂಡು ಗಂಡಸು ನಾಳೆಯೋ ನಾಡಿದ್ದೋ; ನಾನೊಬ್ಬಳೇ ಜೀತ ಮಾಡೋ ಹೆಂಗಸು....ಗೊತ್ತು....ಆದರೂ, ನಾನು ಮಾತ್ರ ಇವತ್ತು ಕತೆ ಹೇಳೋಕೊಪ್ಪುವುದಿಲ್ಲ....ಖಂಡಿತ....

**ಅಳಿಯ**—(ಆಕಾಶ ನೋಡುತ್ತ) ಮಗುವಿಗೆ ಕತೆ ಹೇಳಿದರೆ ತಪ್ಪೇನು? ಏನೂ ಇಲ್ಲ....

**ಭೀಮಿ**—(ಸಿಡಿದು) ಏನೂ ತಪ್ಪಿಲ್ಲ....ನಾಳೆ ಅವನು ಹೆಂಡ ಕುಡಿದು ಸುಳ್ಳು ಚಟಪಟ ಮಾಡಿ ಜೂಜಾಡಿ ಜೈಲಿಗೆ ಹೋದರೂ, ನೀವು ಇಲ್ಲಿ ಕೂತು ಕೊಂಡು, 'ತಪ್ಪೇನು? ಏನೂ ಇಲ್ಲ' ಅಂತ ಸೂಜಿಗೆ ದಾರ ಪೋಣಿಸುತ್ತಾ ಕೂತಿರಿ....ನನಗೆ ಗೊತ್ತು ಮಕ್ಕಳನ್ನ ಸಾಕುವುದು ಹೇಗೆ, ಅಂತ....ನೀವು ಯಾರೂ ನನಗೆ ಕಲಿಸೋದಕ್ಕೆ ಬರಬೇಡಿ....

**ಅಳಿಯ**—(ಆಕಾಶದ ಕಡೆ) ಮಹಾಭಾರತದ ಕಥೇನ ತಾತ ಹೇಳಿದರೆ, ಅದೂ ತಪ್ಪು ಅಂದರೆ, ಏನು ಹೇಳೋಣ?....

**ಭೀಮಿ**—ಸಾಕು, ನಿಲ್ಲಿಸಿ ಅಂದ್ರೆ! (ಒಳಗೆ ಮಗು ಗಟ್ಟಿಯಾಗಿ ಕಿರಿಚುವನು) ಲೋ! ನೀನಿನ್ನೂ ನಿದ್ದೆ ಮಾಡಿಲ್ಲವೇನೋ? ಬಂದೆ, ತಾಳು, ಮಾಡ್ತೀನೆ ನಿನಗೆ....(ಹೊರಡುವಳು)

**ನಾರಣಪ್ಪ**—(ಎದ್ದು ಅಳಿಯನ ಹತ್ತಿರಕ್ಕೆ ಬಂದು) ಹೆಂಗಸಿಗೆ ವಿವೇಕ ವಿವೇಚನೆ ಇಲ್ಲ, ರಾಮು....ಇವಳ ತಾಯಿನೂ ಹೀಗೆಯೇ ಇದ್ದಳು....ಹಿಡಿದದ್ದೇ ಹಟ....ಇಬ್ಬರೇ ಇಬ್ಬರು ಹೆಂಗಸರು ಹಿಂಗೆ ಮಾಡ್ತಾರೆ ಅಂತ ನಾವು ಇಡೀ ಹೆಣ್‌ಲೋಕಾನೇ ಹೀಯಾಳಿಸಬಾರದು; ಆದರೂ,....ಆದರೂ.... ಥತ್! ಇವತ್ತು ಮಗುವಿಗೆ ಅಭಿಮನ್ಯು ಕಥೆ ಹೇಳ್ತೀನೆ ಅಂತ ಮಾತು ಕೊಟ್ಟಿದ್ದೆ....ನಾನು....(ನಿಧಾನವಾಗಿ ತನ್ನ ಮಂಚದ ಮೇಲೆ ಕೂತು ಕೊಳ್ಳುವರು)

**ಅಳಿಯ**—ಈಗಿಲ್ಲದಿದ್ದರೆ ಬೆಳಗ್ಗೆ ಹೇಳಿದರಾಯಿತು....

**ನಾರಣಪ್ಪ**—ಈಗ ಹೇಳೋದು ತಪ್ಪು ಎಂದವಳು, ಬೆಳಗ್ಗೆ ಹೇಳಿದರೂ ತಪ್ಪು ಅಂತಲೇ ಸಾಧಿಸುತ್ತಾಳೆ.

**ಅಳಿಯ** ಹಾಗಲ್ಲ! ನಿನ್ನೆ ರಾತ್ರಿ ಹೇಳಿದ್ದು ನಿಮ್ಮ ತಪ್ಪು ಅಂತ ಹೇಳಿಲ್ಲವಲ್ಲಾ ಇವಳು....

**ನಾರಣಪ್ಪ**—ನಿನ್ನೆ ಮಾಡಿದ್ದೂ ತಪ್ಪು! ಆದರೆ, ನಿನ್ನೆ ಇವಳು ಅದನ್ನ ತಪ್ಪು ಅಂತ ಪತ್ತೆ ಹಚ್ಚಿರಲಿಲ್ಲ ಅಷ್ಟೆ, ನಮ್ಮ ಪುಣ್ಯಕ್ಕೆ.

**ಅಳಿಯ**—ಊಹುಂ! ಅವಳು ಹೇಳುವುದು ಏನು ಅಂದರೆ....

**ನಾರಣಪ್ಪ**—ಸುಮ್ಮನೆ ನಾನೂ ನೀನೂ ವಾದಿಸಿ ಏನು ಪ್ರಯೋಜನ? ಬಹಳ ಸ್ವಾರಸ್ಯವಾಗಿರುತ್ತಿತ್ತು ಇವತ್ತಿನ ಕತೆ, ಮಗುವಿಗೆ....ತಪ್ಪು ಗಿಪ್ಪು ಅಂತ ಇವಳು ತಡೆಯದೆ ಹೋಗಿದ್ದರೆ....

**ಅಳಿಯ**—ಏನು ಮಾಡೋದು? ಅವರನ್ನ ನುಸರಿಸದೆ ವಿಧಿ ಇಲ್ಲವಲ್ಲಾ....

**ನಾರಾಣಪ್ಪ**—ಅದೇ ಬಂದಿರೋದು ತಾಪತ್ರಯ........(ನಿಟ್ಟುಸಿರುಬಿಡುತ್ತಾ ಕೊರಗುವನು). (ಮಗು ಕಿಟ್ಟೋ ಅಂತ ಕಿರಿಚುವನು. ಒಳಗಿಂದ ತಾಯಿ ಅವನನ್ನು ಹೊಡೆಯುವ ಶಬ್ದ ಕೇಳಿಬರುವುದು. ನಾರಣಪ್ಪ

ಮಂಚದ ಮೇಲಿಂದ ಕೆಳಗಿಳಿದು ವೇಗವಾಗಿ ಶತಪಥ ತಿರುಗುವನು.) ಕೇಳಿದೆಯಾ, ಕೇಳಿದೆಯಾ, ರಾಮು? ನಾನು ಏನು ಹೇಳಿದೆ? ಪಾಪ, ಮಗುವಿಗೆ ಅಭಿಮನ್ಯು ಕಥೆ ಸೊನ್ನೆಮಾಡಿಬಿಟ್ಟಳಲ್ಲಾ, ಈ ಹಟಮಾರಿ! ....ನೋಡು ರಾಮು, ಹೆಂಗಸರಿಗೆ ವಿವೇಕ ವಿವೇಚನ ಕಡಮೆ, ಆದರೂ ಅವರೊಂದಿಗೆ ಚರ್ಚೆಮಾಡಿ ಗೆದ್ದವರು ಒಬ್ಬರೂ ಇಲ್ಲ, ಜಗತ್ತಿನಲ್ಲಿ.... ಈಗ, ಕಲ್ಲು ಗುಂಡು, ಮರದ ತುಂಡು ಇವಕ್ಕೆ ವಿವೇಕ ವಿವೇಚನೆ ಉಂಟೆ, ರಾಮು?

**ಅಳಿಯ**—ಉಂಟೆ?

**ನಾರಣಪ್ಪ**—ಕಲ್ಲುಗುಂಡಿಗೆದುರು ನಿಂತು ನಾಲ್ಕು ದಿನ ಚರ್ಚೆ ಮಾಡಿದರೂ, ಅದು ನೀ ಹೇಳಿದ್ದು ಸೈ ಅಂತ ತಲೆಯಾಡಿಸುತ್ತದೆಯೆ?

**ಅಳಿಯ**—ಆಡಿಸುತ್ತದೆಯೆ?

**ನಾರಣಪ್ಪ**—ಆದರೆ ನೋಡು, ಹೆಣ್ಣು ಮಾತ್ರ ನಾವು ಏತಿ ಅಂದರೆ ಪ್ರೇತಿ, ಅಂತ ಹೇಳುತ್ತಲೇ ಇರುತ್ತದೆ. ನಾವು ಹೇಳುವುದು ನ್ಯಾಯ ಅಂತ ಅದಕ್ಕನ್ನಿಸಿದರೂ, ಹಾ ಹೂ ಅಂತ ಎದುರು ಬಿದ್ದು ನಮ್ಮನ್ನೇ ದಡ್ಡರು ಅಂತ ಸಾಧಿಸಿಬಿಡುತ್ತದೆ........ಹುಡುಗನನ್ನು ಎತ್ತಿಕೊಂಡು ಹೋಗಿ, ಹೊಡೆದು ಅಳಿಸಿ, ಮುದುಕನ ಬಾಯಿಮುಚ್ಚಿಸಿ, ಕತೇನೂ ಬೇಡ, ಗಿತೇನೂ ಬೇಡ, ಅಂತ....

**ಅಳಿಯ**—ತಾಳಿ....ತಾಳಿ....(ಎದ್ದು ಬಲಗಡೆ ಬಾಗಿಲ ಹತ್ತಿರ ನಡೆದು, ಒಳಕ್ಕೆ ನೋಡಿ, ಭೀಮಾ....ಭೀಮಾ ಎಂದು ಕೂಗುವನು).

ಭೀಮಿ—(ಬಾಗಿಲಲ್ಲಿ ಕಾಣಿಸಿಕೊಂಡು) ಶ್! ಶ್! ನನ್ನನ್ನ ಕೂಗಬೇಡಿ. ಒಳಗೊಂದು ಮಗು ರಂಪ, (ತಂದೆಯನ್ನು ತೋರಿಸುತ್ತ) ಹೊರಗೊಂದು ಮಗು ರಂಪ....ನನ್ನ ಕೈಲಾಗೋದಿಲ್ಲ....ಎಲ್ಲರ ಹೃದಯವೂ ಹೂವಿನ ಹಂಗಾದರೆ, ಒಬ್ಬಳ ಹೃದಯ ಕಲ್ಲೂ ಆಗಬೇಕು....ಇಲ್ಲದಿದ್ದರೆ, ಮನೆ ನೆಟ್ಟಗಾಗೋದು ಹೇಗೆ (ಮಗು ಪ್ರಲಾಪ ವಿಪರೀತವಾಗುತ್ತದೆ. ಅವಳು) "ಅಯ್ಯೋ! ಶನಿ! ಅಕ್ಕ ಪಕ್ಕದವರೆಲ್ಲ ಯಾರೋ ನಿನ್ನನ್ನ ಖೂನಿ ಮಾಡ್ತಿದಾರೆ ಅಂತ ತಿಳ್ಕೊಳ್ತಾರಲ್ಲೋ...." (ಎನ್ನುತ್ತ, ಒಳಕ್ಕೆ ನುಗ್ಗಿ ವಳು. ಬಾಗಿಲು ಧಢಾರನೆ ಮುಚ್ಚಿಕೊಳ್ಳುವುದು).

**ನಾರಣಪ್ಪ** (ಸ್ವಲ್ಪ ಹೊತ್ತಿನ ಮೇಲೆ) ಹೆಂಗಸರಿಗೆ ತಮ್ಮ ತಪ್ಪು ತಿಳಿಯುವು ದಿಲ್ಲ....ತಾವು ಹಿಡಿದ ದಾರಿಯೇ ಸರಿ ಅಂತ ಅವರಿಗನ್ನಿಸುತ್ತದೆ....ಅದಕ್ಕೆ ಈ ಹಟ....ಆದರೂ, ಅಕ್ಕಪಕ್ಕದವರ ಭಯ ಇದೆ, ಇವಳಿಗೆ....

**ಅಳಿಯ**—ಹೆಂಗಸರಿಗೆಲ್ಲ ಅಕ್ಕಪಕ್ಕದವರು ಏನಂತಾರೋ ಎಂಬ ಭಯ ಇದ್ದೇ ಇದೆ.

**ನಾರಣಪ್ಪ**—(ಲಾಲಿಸುತ್ತ) ಪಾಪ....ಹುಡುಗ! ಆಸೆಯಾಗಿದ್ದ....ಅಭಿಮನ್ಯು ಕಥೆ ಹೇಳ್ತೀನೆ ಅಂತ....ನನಗೇನನ್ನಿಸುತ್ತೆ ಗೊತ್ತೆ, ರಾಮು?

**ಅಳಿಯ**—ಏನನ್ನಿಸುತ್ತೆ?

**ನಾರಣಪ್ಪ**—ತನ್ನ ಹಟ ಸಾಧಿಸಿಕೊಳ್ಳುವುದಕ್ಕೆ ಆ ಹುಡುಗನಿಗೆ ವಯಸ್ಸು ಕಮ್ಮಿ....ನನ್ನ ಹಟ ಸಾಧಿಸಿಕೊಳ್ಳುವುದಕ್ಕೆ ನನಗೆ ವಯಸ್ಸು....ಹೆಚ್ಚು....

**ಅಳಿಯ** – ಹೌದು....ಹೌದು..... ಚೆನ್ನಾಗಿ ಹೇಳಿದಿರಿ....ಎಲ್ಲರಿಗೂ ಅವರವರ ಹಟ....

**ನಾರಣಪ್ಪ**—ಅಂದ್ರೇನು? ಅವರವರಿಗೆ ಬೇಕಾದ್ದು ಅವರವರಿಗೆ ಸಿಗಬೇಕು.... ಅದೇ ಬದುಕು ಅನ್ನೋದು. ಹುಟ್ಟಿದ ಕೂಡಲೇ ಬೇಕಾದ್ದನ್ನು ಪಡೆ ಯುವುದಕ್ಕೆ ದೇವರು ಕೊಟ್ಟಿರೋದು ಏನು, ಮಗುವಿಗೆ? ಅಳು. ತಾಯಿ ಕಿವಿ ಮುಟ್ಟುತ್ತಲೂ, ಬೇಕಾದ್ದು ಸಿದ್ಧಿಸಿಬಿಡ್ತದೆ. ಆಮೇಲೇನು? ಬೆಳೆಯುತ್ತೇವೆ....ದೊಡ್ಡವರಾಗ್ತೇವೆ. ನಡಿಯಬೇಕು, ನಡಿಯುತ್ತೇವೆ; ಓಡಬೇಕು, ಓಡ್ತೀವಿ; ಮನುಷ್ಯ ಆಗ್ತೀವಿ

**ಅಳಿಯ** – ಹೌದು, ಹೌದು....

**ನಾರಣಪ್ಪ**—ಇದೇ ವೇದಾಂತ, ರಾಮು. ಬಾಕಿಯುವನ್ನೆಲ್ಲ ನಮ್ಮ ದಾರಿಗೆ ತರಬೇಕು, ತರ್ತೇವೆ....ಸ್ಕೂಲ್ ಮಾಸ್ತರಾಗ್ತೇವೆ....ದರ್ಪ ಚಲಾಯಿಸ್ತೇವೆ ಆಯಿತು. ಆ ಮೇಲೆ, ಇಳಿಜಾರು, ಇಳಿಯುತ್ತೇವೆ....ಬಲ ಕುಗ್ಗುತ್ತದೆ ....ದರ್ಪ ಇಳಿಯುತ್ತದೆ....ಅಸ್ತಮಾನದ ಸೂರ್ಯ....

**ಅಳಿಯ**—ಅಸ್ತಮಾನದ ಸೂರ್ಯ ಅಂದರೆ?

**ನಾರಣಪ್ಪ**—ಹುಂ! ನಿದ್ದೆಮಾಡುವುದಕ್ಕೆ ಮೊದಲು ಮೊಮ್ಮಗನಿಗೆ ಒಂದು ಕತೆ ಹೇಳಬೇಕು, ಒಳ್ಳೆ ಅಭಿಮನ್ಯೂದು....ಸಾಧ್ಯವಿಲ್ಲ; ನಡಿಯಬೇಕು, ಆಗೋಲ್ಲ; ಓಡಬೇಕು, ಊಹುಂ....ಅಸ್ತಮಾನ....ಸಮುದ್ರದಲ್ಲಿ ಮುಳುಗೇ ಬಿಡೋದು....

**ಅಳಿಯ**— ಛೆ.... ಛೆ.... ಹಾಗನ್ನಬೇಡಿ.

**ನಾರಣಪ್ಪ**—ಅದಕ್ಕಲ್ಲ ನಾನು ಹೇಳೋದು....ಮುಳುಗುವ ಲಗ್ನ ಬಂದಾಗ ಮುಳುಗ್ತೇನೆ....ಆದರೆ, ಆ ಲಗ್ನ ಬರೋದಕ್ಕೆ ಮೊದಲೇ ಮುಳುಗು ಅಂದಾಗ, ಏನೋ ಒಂದು ತರಹ ಆಗ್ತದೆ. ಅಷ್ಟೆ.

**ಅಳಿಯ**—ಮುಳುಗು....ಅಂತ....ಯಾರು....

**ನಾರಣಪ್ಪ**—ಅದೇ....ಇವಳು....ಕತೆ ಹೇಳೋ ಅಭ್ಯಾಸ ಕೆಟ್ಟದ್ದು ಅಂತ ಆ ಮಗೂನ ಎತ್ತಿಕೊಂಡು ಹೋಗಿ ಹೊಡೆದು ಬಡಿದು....

**ಅಳಿಯ**—ಅಷ್ಟು ಮನಸ್ಸು ನೊಂದುಕೊಳ್ಳಬಾರದು ನೀವು....

**ನಾರಣಪ್ಪ**—ನಾನು ವೇದಾಂತಿ, ರಾಮು! ವೇದಾಂತ ಅಂದರೆ ಏನು ಅಂತೀಯಾ? ಮುದುಕರಾಗೋದು ಹೇಗೆ ಅಂತ ಅರಿತುಕೊಳ್ಳೋದು.... ಒಂದು ಬಂಡೆ ಇದೆ....ನೂರು ವರ್ಷ. ಇನ್ನೂರು ವರ್ಷ ಅದು ಬಂಡೇನೆ. ಯಾವತ್ತೋ ಒಂದು ದಿನ, ತಲೆ ಮೇಲೆ ಬಡಿಯುತ್ತಾರೆ, ಛಿನ್ನಭಿನ್ನ.... ನೂರು ಚೂರು....ಆದರೆ, ಮನುಷ್ಯ? ಒಂದೊಂದಾಗಿ ಪೆಟ್ಟು ಬೀಳುತ್ತದೆ ಒಂದೊಂದು ಚೂರಾಗಿ ಒಡಿಯುತ್ತಾನೆ. ಮನೆ, ಮಠ, ಹಸು, ಕರ, ಮಗ, ಮಡದಿ....ಕಡೆಗೆ ಮೊಮ್ಮಗನಿಗೆ ಒಂದು ಚಿಕ್ಕ ಕಥೆ ಹೇಳೋಣ ಎಂದರೆ, ಅವನೂ ಕೈಗೆ ಸಿಕ್ಕೋಲ್ಲ...(ಭೀಮಿ ಪ್ರವೇಶಿಸುವಳು. ಬಾಗಿಲನ್ನು ಎಳೆದು ಹಾಕುವಳು.)

**ಅಳಿಯ**—ನಿದ್ದೆ ಮಾಡಿದನೋ?

**ಭೀಮಿ**—ಶ್! ಶ್! ಇಲ್ಲ, ಇಲ್ಲ....ಕಿಟಕಿ ಬಾಗಿಲೆಲ್ಲ ಭದ್ರವಾಗಿ ಹಾಕಿದೇನೆ.... ನೆರೆಹೊರೆಯವರಿಗೆ ಅವನ ಅಳು ಕೇಳಿಸುವುದಿಲ್ಲ....

**ಅಳಿಯ**—ಏನೇ ಇದು? ಭೀಮಿ! ನೀನು ನಿನ್ನ ತಂದೇನ....

**ಭೀಮಿ**—ಸುಮ್ಮನಿರಿ, ಅಂದ್ರೆ....ನನ್ನನ್ನ ರೇಗಿಸಬೇಡಿ....(ತಂದೆಯ ಹಾಸಿಗೆಯನ್ನು ಸರಿಪಡಿಸುತ್ತಿರುವಳು). (ನಾರಣಪ್ಪನವರು ಎದ್ದು, ರಂಗಸ್ಥಳದ ಎಡಪಕ್ಕಕ್ಕೆ ಹೋಗಿ ನಿಂತು, ಅಯ್ಯೋ ಎಂದು ಗಟ್ಟಿಯಾಗಿ ಅಳುವರು. ಎಲ್ಲರೂ ಸ್ತಬ್ಧರಾಗುವರು).

**ಭೀಮಿ**—ಇದೇನಪ್ಪಾ! ಏನಾಗಿದೆ ನಿನಗೆ?

**ನಾರಣಪ್ಪ**– (ಥಟಕ್ಕನೆ ಅಳು ನಿಲ್ಲಿಸಿ ಎಂದಿನ ದನಿಯಲ್ಲಿ) ಏನೂ ಇಲ್ಲ....ಮಗುವಿಗೆ ಕಥೆ ಹೇಳಬೇಕು, ನಾನು.

**ಭೀಮಿ**—ಅದೆಲ್ಲ ಆಗುವುದಿಲ್ಲ....ಕೆಟ್ಟ ಚಾಳಿ....ಅದನ್ನ ತಪ್ಪಿಸಬೇಕು ಅಂತ ನಾನು....

**ನಾರಣಪ್ಪ**—(ಹಿಂದಿನಂತೆ) ಅಯ್ಯೋ! ಅಯ್ಯೋ!....(ಥಟಕ್ಕನೆ ನಿಲ್ಲಿಸಿ, ಅಳಿಯನ ಕಡೆ ತಿರುಗಿ, ಎಂದಿನ ದನಿಯಲ್ಲಿ) ಜ್ಞಾಪಕ ಇದೆಯೆ, ರಾಮು, ನಾನು ಹೇಳಿದ್ದು....ಕೈಲಾಗದ ಮಕ್ಕಳಿಗೆ ದೇವರು ತಮಗೆ ಬೇಕಾದ್ದನ್ನ ಪಡೆಯುವುದಕ್ಕೆ ಅಳುವನ್ನ ದಯಪಾಲಿಸಿದಾನೆ ಅಂತ....(ಹಿಂದಿನಂತೆ) ಅಯ್ಯೋ! ಅಯ್ಯೋ!

**ಭೀಮಿ**—ಅಪ್ಪಾ! ಅಕ್ಕಪಕ್ಕದವರು ಏನಂದುಕೊಂಡಾರು? ನಿನ್ನನ್ನ ಯಾರಾದರೂ ಖೂನಿ....

**ನಾರಣಪ್ಪ**—ನನಗೆ ಗೊತ್ತು....ಚೆನ್ನಾಗಿ ಗೊತ್ತು, ಅವರೇನಂದುಕೊಂಡಾರು, ಅಂತ....ಅದಕ್ಕೇ ಪಕ್ಕದ ಮನೆ ಕಡೆ ತಿರುಗಿದೇನೆ....ಅಯ್ಯೋ!

**ಭೀಮಿ**—ಯಾರಾದರೂ ಓಡಿ ಬಂದರೆ ಏನು ಗತಿ?

**ನಾರಣಪ್ಪ**—ಬರಲಿ, ನನಗೇನು? ನಿನ್ನನ್ನೇ ಕೇಳ್ತಾರೆ, ಯಾಕೆ ನಿನ್ನ ತಂದೆ ಗೋಳಾಡ್ತಾನೆ ಅಂತ....ಅಯ್ಯೋ!

**ಭೀಮಿ**—ನೀವೂ ಸುಮ್ಮನೆ ಕೂತಿದೀರಲ್ಲಾ....(ಒಳಗೆ ಹುಡುಗನ ಅಯ್ಯೋ ಕೇಳಿಬರುವುದು)

**ಅಳಿಯ**—ನಾನೇನು ಮಾಡಬೇಕು ಅಂತೀಯಾ....ಹುಡುಗನನ್ನ....

**ನಾರಣಪ್ಪ**—ಅಯ್ಯೋ!

**ಭೀಮಿ**—ಹುಚ್ಚು ಹಿಡಿದಿದೆ ಅಂತ ತಿಳಿದುಕೊಳ್ಳುತ್ತಾರೆ, ಅಕ್ಕಪಕ್ಕದವರು ... ಅಷ್ಟೆ.

**ನಾರಣಪ್ಪ**—ಗೊತ್ತು ಭೀಮಿ, ಗೊತ್ತು....ನನಗದೂ ಗೊತ್ತು. ರಿಟೈರಾದ ಮೇಷ್ಟರಿಗೆ ಅರವತ್ತರಲ್ಲಿ ಅರಳು ಮರುಳು ಅಂತಾರೆ ಅಂತ....ಆದರೆ, ಏನು ಮಾಡುವುದು....ಆ ಹುಡುಗನಿಗೆ ನಾನು ಇವತ್ತು, ಯಥಾಪ್ರಕಾರ, ಕತೆ ಹೇಳಲೇಬೇಕು.

ಭೀಮಿ—ದಿನಾಲು ನೀನು ಹೇಳುತ್ತಾನೇ ಇದ್ದರಿ, ಅದಕ್ಕೆ ಅದೇ ಕೆಟ್ಟ ಅಭ್ಯಾಸ ....(ಒಳಗಿಂದ ಅಯ್ಯೋ)

ನಾರಣಪ್ಪ—ಅಯ್ಯೋ !

ಭೀಮಿ—(ಎರಡು ಕಿವಿಗಳನ್ನೂ ಮುಚ್ಚಿ ಹಿಡಿಯುತ್ತಾ) ಸಾಕು, ನಿಲ್ಲಿಸು ಅಪ್ಪಾ! ....(ಗಂಡನಿಗೆ) ಹೋಗಿ ಹುಡುಗನನ್ನೆತ್ತಿಕೊಂಡು ಬನ್ನಿ, ಬೇಗ.... (ಅಳಿಯ ಒಳಕ್ಕೆ ಧಾವಿಸುವನು....ನಾರಣಪ್ಪನವರು ಮಂಚದ ಮೇಲೆ ಕೂತು ಕತೆ ಹೇಳುವುದಕ್ಕೆ ಸಿದ್ಧರಾಗುವರು....ಅಳಿಯ ಹುಡುಗನನ್ನು ತಂದು ಅವರ ತೊಡೆಯ ಮೇಲೆ ಕೂರಿಸುವನು).

ನಾರಣಪ್ಪ—ಬಾ....ಬಾರೋ ನನ್ನ ಚಿನ್ನ ! (ಕಣ್ಣೊರಸಿಕೊಳ್ಳುತ್ತ) ಇವತ್ತು ನಾವಿಬ್ಬರೂ ಅಳಬೇಕಾಯಿತು, ಅಲ್ಲವೇನೋ? (ನಗುತ್ತ) ಅಂತೂ, ಗೆದ್ದೇಬಿಟ್ಟೆವು ಕಣೋ....ಬಾ! ಕೂತುಕೊ!...(ಭೀಮಿ ಮೂತಿ ಉದ್ದ ಮಾಡುತ್ತ ರೂಮಿನೊಳಕ್ಕೆ ಹೋಗುವಳು....ಅಳಿಯ ಹೊಲಿಯುತ್ತಲೇ ಇರುವನು) ಪಂಚ ಪಾಂಡವರಿದ್ದರಲ್ಲಾ.....ಧರ್ಮರಾಯ, ಭೀಮ..... ಅರ್ಜುನ, ಆ ಮೇಲೆ....

ಹುಡುಗ—ನಕುಲ, ಸಹದೇವ....

ನಾರಣಪ್ಪ—ಅವರೇನು ಮಾಡಿದರು ಅಂತೀಯಾ, ಮಗೂ....

-( ಪರದೆ )-

[ಹಾರಾಲ್ಡ್ ಚಾಪಿನ್ ಎಂಬುವರ ಆಂಗ್ಲ ನಾಟಕವನ್ನನುಸರಿಸಿ]

---

"ಉದರ ನಿಮಿತ್ತಂ ಬಹುಕೃತ ವೇಷಂ"—

ಹೋಟಲ್ ಮಾಣಿ.

# ಬಲಾಬಲ 



.......ಮುಂದುವರಿಯುತ್ತಾ ಭಾಷಣಕಾರರು, "ಇವತ್ತು ನೀವು ನನ್ನನ್ನು ಇಲ್ಲಿಗೆ, ಈ ಸಮಾರಂಭಕ್ಕೆ ಆವ್ಹಾನಿಸಿರುವುದು ನನಗೊಂದು ಎಮ್ಮೆ. ಅತ್ತೊ ಜನರ ಕೆಲಸವೆಂದರೆ, ಉಮ್ಮಸ್ಸಿನಿಂದಲೂ, ಉರುಪಿ ನಿಂದಲೂ ತನು ಮನ ದನದ ಅಂಗು ತೊರೆದು ದುಡಿಯಲು ನಾನು ಸದಾ ಸಿದ್ಧನಾಗಿರುವೆನು. ಬರೀ ಬಾಷಣಗಳಿಂದ ಗಾಂದಿಯ ಮಾತು ನಡೆಸಿದಂತಾ ಗುವುದಿಲ್ಲ. ಇರುವ ಬಲವನ್ನೆಲ್ಲ ಉಪಯೋಗಿಸಿ ನಾವು ದುಡಿಯಬೇಕಾದ ಕಾಲ ಇದು. ಅಳ್ಳಿ ರೈತರಂತೂ ತುಂಬಾ ಉಷಾರಾಗಿರಬೇಕು. ಆವಾಡಿಗರು ಆವನ್ನು ಆಡಿಸುವಂತೆ, ಅವರಿಗೆ ಇತೋಪದೇಶ ಮಾಡಿ ಅವರನ್ನು ಇಡಿತ ದಲ್ಲಿರಿಸೋಕೆ ಉಚ್ಚುಚ್ಚಾಗಿ ಚಳುವಳಿ ಉಟ್ಟಿಕೊಂಡಿರೋ ಕೆಟ್ಟಕಾಲ ಇದು" ಎಂದು ಏಳಿದರು.

ಕಡೆಗೆ, ಅಧ್ಯಕ್ಷರು ಎದ್ದು, ಉಪನ್ಯಾಸಖರನ್ನು ವಂಧಿಸಿ, ಅವರಿಗೆ ಭಿನ್ನ ವತ್ತಳೆಯನ್ನರ್ಪಿಸಬೇಕೆಂದು ಸೂಚಿಸಿದರು. ಹೇನೇ ಬರಲಿ, ಹನ್ಯಾಯ ಮಾಡ ಬಾರದೆಂದು ಸಾರಿದರು. ಪಂಢಿತ ನೆಹರೂರವರ ಸಂಧೇಶವನ್ನು ಪುಷ್ಟೀಕರಿ ಸುತ್ತ ಸುಮಾರು ಒಂದು ಗಂಟೆ ಕಾಲ ಮಾತನಾಡಿದರು. ರೈಥರ ಸ್ಥಿತಿಗಥಿ ಗಳನ್ನು ಖೂಲಂಖುಷವಾಗಿ ವಿವರಿಸಿದರು; ಒಬ್ಬರನ್ನೊಬ್ಬರು ಧೂಷಿಸುವ ಧುರಭ್ಯಾಸವನ್ನು ತ್ಯಜಿಸಬೇಕೆಂದೂ ದೇಶದ ಎಲ್ಲ ಖೋಮಿನವರೂ ಭುಜಕ್ಕೆ ಭುಜಕ್ಕೆ ಕೊಟ್ಟು ಧುಡಿಯಬೇಕೆಂದೂ ಹಾಗೆ ಮಾಡಿದ್ದೇ ಆದರೆ, ಹಿಂದೂ ಸ್ಥಾನ ಪ್ರಫಂಚದ ಎಲ್ಲ ರಾಷ್ಟ್ರಗಳಿಗೂ ಮೇಲೆನಿಸುವುದೆಂದೂ ಹೇಳಿದರು.

ಕರಥಾಡನಗಳ ನಡುವೆ ಉಭಯತ್ರರಿಗೂ ಏರ ಘುರಾಣಿಗಳನ್ನು ಅರ್ಪಿಸ ಲಾಯಿತು.

---

# ಕನ್ನಡಿಗನ ಸಾಹಸ

ಮದ್ರಾಸ್‌ನಲ್ಲಿ ಸುಖವಾಗಿ ಹೋಟಲಿಗೆ ಹೋಗಿ, ಇಡ್ಲಿ ದೋಸೆ ತಿಂದು, ವಿಮಾನ ಹತ್ತಿದರೆ, ಮೊದಲನೆಯ ತೇಗು ಬೆಂಗಳೂರಲ್ಲಿ ಎಂದರು ನನ್ನ ಸ್ನೇಹಿತರೊಬ್ಬರು. ಸುಳ್ಳಿರಲಾರದು. ಬೊಂಬಾಯಿ ಹೋಟಲಿನಲ್ಲಿ ಶ್ರೀಖಂಡ ತಿಂದು, ಮಧ್ಯಾಹ್ನ ೩ ಗಂಟೆಗೆ ವಿಮಾನ ಹತ್ತಿದರೆ, ಶ್ರೀ ಹೆಂಡ ಕುಡಿಯುವ ಕಾಲಕ್ಕೆ ಸರಿಯಾಗಿ ಮಧ್ಯಾಹ್ನ ಬೆಂಗಳೂರಿಗೆ ಬಂದು ಸೇರಿಬಿಡಬಹುದು, ಅಂದರು. ನಿಜ.

ಅಮೇರಿಕಾದಲ್ಲಿ ಇದಕ್ಕಿಂತ ವೇಗವಂತೆ. ಅಲ್ಲಿ ಶಬ್ದಕ್ಕಿಂತ ವೇಗವಾಗಿ ಹಾರುವ ಹಾರೋಪ್ಲೇನುಗಳಿವೆಯಂತೆ. ಏಕೆ, ಸೂರ್ಯಾಸ್ತಮನಕ್ಕೆ ಸರಿಯಾಗಿ ನ್ಯೂಯಾರ್ಕಿನಿಂದ ವಿಮಾನ ಹತ್ತಿ ಹಾರಿದರೆ, ಅದೇ ದಿನ ಅದೇ ಸೂರ್ಯಾಸ್ತಮನದ ಮುಹೂರ್ತಕ್ಕೆ ಸರಿಯಾಗಿ ೫೦೦ ಮೈಲಿ ಆಚೆ ಇರುವ ಸಾನ್ ಫ್ರಾನ್ಸಿಸ್ಕೋ ನಗರವನ್ನು ತಲಪಬಹುದಂತೆ; ಜಂಭ ಕೊಚ್ಚಿಕೊಳ್ಳುತ್ತಾರೆ, ಅಲ್ಲಿಯವರು.

ಆದರೆ,........ಕನ್ನಡಿಗರು ಯಾವಾಗಲೂ ಮಿತ ಭಾಷಿಗಳು; ಜಂಬ ಕೊಚ್ಚಿಕೊಳ್ಳದೆ ತಮ್ಮ ಪಾಡಿಗೆ ತಾವು ಎಲೆ ಮರೆ ಕಾಯಿಯ ಹಾಗೆ, ವನಸುಮದಂತೆ ಬಾಳಿ ಬದುಕುವ ಜನರು. ಆದರೂ, ಗುಣಕ್ಕೆ ಮತ್ಸರವೆ? ನಿಜಸ್ಥಿತಿಯನ್ನು ಏಕೆ ಹೇಳಿಕೊಳ್ಳಬಾರದು? ನಾಚಿಕೆ ಏನು, ಅದರಲ್ಲಿ?

ಹೇಳೇಬಿಡ್ತೇನೆ, ಸತ್ಯ ನುಡಿಯುವುದಕ್ಕೆ ಹಿಂಜರಿಯಬಾರದು.

ನಾನು, ಈ ವಿಮಾನಗಳಿಗಿಂತೆಲ್ಲ ವೇಗವಾಗಿ ನಡೆಯಬಲ್ಲೆ, ಇದೇ ಬೆಂಗಳೂರಿನ ಬೀದಿಗಳಲ್ಲಿ ಬೇಕಾದರೆ, ನಿಮ್ಮ ಮುಂದೆ, ನೀವು ಗೊತ್ತುಮಾಡಿದ ದಿನ, ನಡೆದು ತೋರಿಸಬಲ್ಲೆ. ಕನ್ನಡಿಗ ತನ್ನ ನಾಡಿಗೆ ಕೀರ್ತಿ ತರಬಲ್ಲ, ಎಂಬುದನ್ನು ಪ್ರತ್ಯಕ್ಷ ಪ್ರಮಾಣಗಳಿಂದ ನಿಮಗೆ ಮನವರಿಕೆ ಮಾಡಿಸಬಲ್ಲೆ.

ಅಷ್ಟು ವೇಗ ನಡೆಯುವುದೇ ನನ್ನ ದಿನದಿನದ ಅಭ್ಯಾಸ; ಅದು ನನಗೆ ಸಹಜವಾಗಿಬಿಟ್ಟಿದೆ. ಸೆಂಟ್ರಲ್ ಕಾಲೇಜು ಗೋಪುರದ ಮೇಲೊಂದು ಗಡಿಯಾರ ಇಲ್ಲವೆ? ಅದರ ಎದುರಿನಿಂದ ಟೆಕ್ನಲಾಜಿಕಲ್ ಶಿಕ್ಷಣಾಲಯದ ಗೋಪುರದ ಗಡಿಯಾರದ ತನಕ ಮೊನ್ನೆ ನಾನು ನಡೆದೆ. ಎಷ್ಟು ವೇಗದಲ್ಲಿ, ಅಂತೀರಾ? ನೀವೇ ಗುಣಾಕಾರ ಮಾಡಿಕೊಳ್ಳಿ. ಆ ೨೦೦ ಗಜ ದೂರವನ್ನು ದಾಟಲು ನಾನು ಅರ್ಧ ನಿಮಿಷ ಕೂಡ ತೆಗೆದುಕೊಳ್ಳಲಿಲ್ಲ. ಕಾಲದ ವೇಗಕ್ಕಿಂತ ಹೆಚ್ಚು

ವೇಗ ನನ್ನದು. ಏಕೆಂದರೆ, ನಾನು ಹೊರಟಾಗ ಸೆಂ. ಕಾ. ಗಡಿಯಾರದಲ್ಲಿ ೧೦-೪೦; ಸೇರಿದಾಗ ಟೆ. ಶಿ.ಲಯದ ಗಡಿಯಾರದಲ್ಲಿ ೧೦-೩೫! ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಗಡಿಯಾರ ತಪ್ಪು ಎಂದು ಹೇಳಿದರೆ, ನಾನೊಪ್ಪುವುದಿಲ್ಲ.......ಟೆಕ್ನಲಾಜಿಕಲ್ ಶಿಕ್ಷಣಾಲಯದ ಗಡಿಯಾರ ಎಂದಾದರೂ ತಪ್ಪು ತೋರಿಸುತ್ತದೆಯೆ?

ಮಾರ್ಕೆಟ್ ಚೌಕದಿಂದ ಸೆಂ. ಕಾಲೇಜಿಗೆ ಮುಕ್ಕಾಲು ಮೈಲಿ ತಾನೆ? ಮಾರ್ಕೆಟ್ ಗಡಿಯಾರದಲ್ಲಿ ೯-೩೦ಕ್ಕೆ ಹೊರಟು, ನಾನು, ತಮ್ಮ ಈ ಭೂಪ, ಸೆಂ. ಕಾಲೇಜಿಗೆ ಬಂದಾಗ, ಪ್ರಸಿದ್ಧ ವಿಜ್ಞಾನ ಶಿಕ್ಷಣ ಕೇಂದ್ರವಾದ ಆ ಸಂಸ್ಥೆಯ ಅತ್ಯಾಧುನಿಕ ಅಮೋಘ ಗಡಿಯಾರದಲ್ಲಿ ಟೈಂ ಎಷ್ಟು ಅಂತೀರೋ ........೯-೨೫! ಹೇಗಿದೆ ನನ್ನ ಸಾಹಸ?

ತುಂಬಿದ ಕೊಡ, ಅಂತ ನನಗೇ ತೀರ್ಮಾನವಾದ ಮೇಲೆ, ನಾನು ತುಳುಕದಿರುತ್ತೇನೆಯೆ? ಮೊನ್ನೆ ನನ್ನ ವೇಗ ಸಂಚಾರದ ಮಹತ್ವವನ್ನು ಪರೀಕ್ಷಿಸುವುದಕ್ಕಾಗಿ ನಾನು ನಗರ ಸಭೆಯ ಕಟ್ಟಡಕ್ಕೆ ಹೋದೆ. ಅಲ್ಲೂ ಗಡಿಯಾರದ ಗೋಪುರ ಇದೆಯಲ್ಲಾ, ನಾಲ್ಕು ಮುಖದ್ದು. ಉತ್ತರ ಮುಖದಲ್ಲಿ ೩-೩೦ ಆಗಿತ್ತು ಸರಿಯಾಗಿ. ನಲವತ್ತು ಹೆಜ್ಜೆ ಹಾಕಿ, ಪಶ್ಚಿಮ ಮುಖದ ಹತ್ರ ಬಂದೆ ........ಎಷ್ಟು ವೇಗ ಅಂತೀರೋ? ಆಗ ಇನ್ನೂ ೩ ಆಗಿರಲಿಲ್ಲ!

ಆದರೆ, ಆಗ ನನ್ನ ಮೇಲೆ ಒಬ್ಬನ ಕೆಟ್ಟ ದೃಷ್ಟಿ ಬಿತ್ತು. ನನ್ನ ಹಳೇ ಸ್ನೇಹಿತ ಶಿಂಗಾರಿ ಸಿಕ್ಕಿದ. ಅವನು ನನ್ನನ್ನ ಮುನಿಸಿಪಲ್ ಆಹಾರ ಮಂದಿರಕ್ಕೆ ಕರೆದುಕೊಂಡು ಹೋಗಿ, ಎರಡು ಉದ್ದಿನ ವಡೆ ಕೊಡಿಸಿದ. ತಿಂದೆ. ನನ್ನ ನಡಿಗೆಯ ಬಿರುಸು ಕುಗ್ಗಿತು; ನನ್ನ ಹೆಮ್ಮೆ ತಗ್ಗಿತು. ತಿಂದ ತಕ್ಷಣ, ಅವನಿಗೆ ವೇಗ ತೋರಿಸೋಣ ಅಂತ, ಪಶ್ಚಿಮದ ಮುಖದಲ್ಲಿ ೩-೧೫ ಆಗಿದ್ದಾಗ ದಕ್ಷಿಣದ ಮುಖದ ಕಡೆಗೆ ನಡೆದೆ....ಅಲ್ಲಿ, ಆಗಲೇ ೪-೨೦ ಆಗಿಬಿಟ್ಟಿತ್ತು, ಟೈಂ.

ಕೊರಗುತ್ತ ಕೊರಗುತ್ತ, ಅಲ್ಲಿಂದ ಮಾರ್ಕೆಟ್ ಚೌಕದ ಕಡೆ ನಡೆದೆ, ಸಿಧಾನವಾಗಿ. ಗಡಿಯಾರ ನೋಡಿದೆ. ಇನ್ನೂ ಆ ಗಡಿಯಾರದ ಪ್ರಕಾರ ೩ ಹೊಡೆಸೇ ಇರಲಿಲ್ಲ. ಆಗ ಮನಸ್ಸಿನಲ್ಲಿ ಹೊಸ ಹರ್ಷ ಉಕ್ಕಿ ಬಂತು. ನಾನು ನಾನೇ ಎಂಬುದು ದೃಢವಾಯಿತು.

ನಿಮ್ಮ ನಿಮ್ಮ ಊರುಗಳಲ್ಲಿ, ಗಡಿಯಾರದ ಗೋಪುರಗಳಿದ್ದರೆ, ಅಲ್ಲೂ ಬಂದು, ಒಂದರಿಂದ ಮತ್ತೊಂದಕ್ಕೆ ನಡೆದು, ನನ್ನ ವಿಮಾನಾತೀತ ವೇಗವನ್ನು ಪ್ರದರ್ಶಿಸಿ, ಜಗತ್ತಿಗೆಲ್ಲ ಕನ್ನಡಿಗನ ಕೀರ್ತಿಯನ್ನು ಬೆಳಗಬೇಕೆಂಬುದೇ ನನ್ನ ಹೆಬ್ಬಯಕೆ. ದೇಶಾಭಿಮಾನಿಗಳಾದ ಮಹಾಜನಗಳ ಸಹಾಯವಿದ್ದರೆ, ಯಾವುದು ತಾನೆ ಅಸಾಧ್ಯ?

—ಶ್ರೀಪಾದ

# ಗಾದೆ ಹೇಳಿದ ಹಾಗೆ

---

**ಆತ :**—ಗಂಡಸಿಗೇಕೆ ಗೌರೀ ದುಃಖ? ಏನಾದರೂ ಮಾಡಿಕೊ.

**ಆಕೆ :**—ಗೌರೀಗೇಕೆ ಗಣೇಶನ ದುಃಖ? ಅಂತ ನಾನು ಸುಮ್ಮನಿದ್ದೆನೆ?

**ಕೂಸು :**—ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾಯಿತು, ನೋಡಿ.

**ಆತ :**—ಹೆಂಡತಿ ಹೆಗ್ಗಡೆಯಾದರೆ, ಗಂಡ ಮೂಳನಾಯಿಗಿಂತ ಕಡೆ, ಜಗತ್ತಿನಲ್ಲಿ.

**ಆಕೆ :**—ಹೆಸರು ಹೊನ್ನ ಹೆಗ್ಗಡೆ ಎಸರಿಗೆ ಬೇಳೆ ಇಲ್ಲ, ಮನೆಯಲ್ಲಿ.

**ಕೂಸು :**—ಅಂತು ಇಂತು ಕುಂತೀ ಮಕ್ಕಳಿಗೆ ಕದನ್ನ.

**ಆತ :**—ಕೂಳಿಕ್ಕೋನೇ ಒಡೆಯ, ಕಣೆ.

**ಆಕೆ:**—ಈ ಕೂಸು ಹುಟ್ಟುವುದಕ್ಕೆ ಮುಂಚೆ ಕುಪ್ಪಸ ಹೊಲಿಸಿದಿರಿ, ನೆನಪಿದೆಯೆ?

**ಕೂಸು:**—ಕೂಸನ್ನು ಜಿಗುಟೋದು, ತೊಟ್ಟಿಲನ್ನು ತೂಗೋದು, ಇವರ ಚಾಳಿ

**ಆತ:**—ಮಕ್ಕಳಿಲ್ಲದಿದ್ದರೆ ನಿನ್ನ ಕಷ್ಟ, ಇದ್ದಮೇಲೆ ನನಗೆ ಕಷ್ಟ ತಾನೆ?

**ಆಕೆ:**—ಹೆತ್ತ ಮೇಲೆ ಬುದ್ಧಿ ಬಂತು, ಅನ್ನಿ.

**ಕೂಸು:**—ಹೋಗಿ ಬಂದು ಹುಡುಗನನ್ನು ಹೊಡೆಯಿತೀರಲ್ಲಾ!

**ಆತ:**—ಅದೇ ಉಂಡೇನು, ತಟ್ಟೆ ಮಡಗು, ಇನ್ನು.

**ಆಕೆ:**—ತಬ್ಬಲಿ ದೇವರಿಗೆ ತಂಬಿಟ್ಟೇ ನೈವೇದ್ಯ, ನೆನಪಿರಲಿ.

**ಕೂಸು:**—ತಾಯಿ ಮಕ್ಕಳಾದರೂ ಬಾಯಿ ಬೇರೆ, ಜ್ಞಾಪಕ ಇದೆ ತಾನೆ?

**ಆತ:**—ಹಸಿದ ಹೊಟ್ಟೆ ತೋರಿಸಿದರೆ ಹಳಸಿದ ಅನ್ನ ತೋರಿಸುತ್ತೀಯಾ?

**ಆಕೆ:**—ಹುಟ್ಟಿಸಿದ ದೇವರು ಇಷ್ಟಾದರೂ ಕೊಟ್ಟನಲ್ಲಾ! ಅನ್ನಿ.

**ಕೂಸು:**—ಹೆತ್ತವರಿಗೆ ನಾನೆತ್ತಣ ಮುದ್ದು?

---

# ಉತ್ತರದ ಪೌರುಷ

— o —

ಈ ಸಾರಿ ನನಗೆ ಪಾಸಾಗಲೇ ಬೇಕು.

ಇಲ್ಲದಿದ್ದರೆ, ಮುಟ್ಟಿದ್ದಕ್ಕೆ ಮೂರು ಸಲ, ಎಂಬ ನಾಣ್ಣುಡಿ ಸುಳ್ಳು! ಮರಳಿ ಯತ್ನವ ಮಾಡು, ಮರಳಿ ಯತ್ನವ ಮಾಡು ಎಂದು ಹಿರಿಯ ಕವಿಗಳು ಬರೆದದ್ದು ಕಗ್ಗ! ಸಗ್ಗದೆಯ ಕುಗ್ಗದೆಯ ನುಗ್ಗಿನಡೆ ಮುಂದೆ, ಎಂದು ಕಿರಿಯ ಕವಿಗಳು ಕೂಗಿದ್ದು, ಬರಿ ಸೋಗು! ಉತ್ತಿಷ್ಠ, ಜಾಗ್ರತ, ಪ್ರಾಪ್ಯವರಾನ್ನಿಬೋಧತ ಎಂದು ವಿವೇಕಾನಂದರು ಉಪದೇಶಿಸಿದ್ದು ವ್ಯರ್ಥ. ಪಕ್ಷಿಶಾಸ್ತ್ರ, ಸಾಮುದ್ರಿಕಾ ಸಯನ್ಸು, ಜಾತಕ ಪಾರಿಜಾತ—ಎಲ್ಲವೂ ಕಾಡುಹರಟೆ.

ಅದೂ ಅಲ್ಲದೆ, ಈ ಸಾರಿಯ ಪರೀಕ್ಷೆಗಾಗಿ ನಾನು ಹೊಸವಿಧಾನವನ್ನನುಸರಿಸಿ ಪಾಠಗಳನ್ನು ಓದಿದೇನೆ. ಪ್ರತಿಯೊಂದು ಪುಸ್ತಕವನ್ನೂ ಗೋಧೂಳಿ ಮುಹೂರ್ತದಲ್ಲಿ, ಮೂಡಲಿಗೆ ತಿರುಗಿ ಕುಳಿತು, ಕಿವಿ ಮೇಲೆ ತುಲಸೀದಳವೇರಿಸಿ ಓದಿದೇನೆ. ಗಂಟಲು ಒಡೆಯುವಷ್ಟು, ಕಿವಿ ಕೀವು ಸುರಿಯುವಷ್ಟು, ಗಟ್ಟಿಯಾಗಿ ಓದಿದೇನೆ. ಹಿಂದಿನಿಂದ ಮುಂದಿನವರೆಗೂ, ಕೆಳಗಿಂದ ಮೇಲಕ್ಕೂ ಬಲದಿಂದ ಎಡಕ್ಕೂ, ತಿರುಗ ಮರುಗ ಓದಿದೇನೆ. ಈ ರೀತಿ ಮತ್ಯಾರೂ ಮಾಡಿರಲಾರರು.

ಉತ್ತರ ಬರೆದಿರುವುದೂ ಅಷ್ಟೆ—ನನ್ನದು ಹೊಸ ರೀತಿ, ಯಾರೂ ಇದುವರೆಗೂ ಅನುಸರಿಸದ ರೀತಿ. ಪ್ರತಿಯೊಂದು ಉತ್ತರದ ಕೊನೆಯ ಪಂಕ್ತಿಯಲ್ಲೂ ಎಲ್ಲ ಬಾಬರುಗಳನ್ನೂ ಸ್ಮರಿಸಿದೇನೆ. ಕುತ್ತ ಕೊನೆಯಲ್ಲಿ, ಸ್ವತಂತ್ರ ಭಾರತದ ಸುಮನೋಹರ ಕುರುಹಾದ ಚಕ್ರವನ್ನು ನಾನೇ ಸ್ವಹಸ್ತದಿಂದ ದೊಡ್ಡದಾಗಿ ಬಿಡಿಸಿದೇನೆ.

ನನ್ನ ಭಾಷೆ ಕೂಡ ತೀರ ಹೊಸ ನಮೂನೆ; ವಚನ ರಚನಾಚಾತುರ್ಯ ವಿಲಕ್ಷಣವಾದ್ದು; ಪದ ಜೋಡಣೆ ಅದ್ವಿತೀಯ. ತನು ಮನ ಧನಗಳನ್ನರ್ಪಿಸಿ ದೇಶನಾಯಕರು ಇಂಗ್ಲೀಷರನ್ನೋಡಿಸಿದ ಮೇಲೆ, ನಮಗೇಕೆ ಅವರ ವ್ಯಾಕರಣದ ಹಂಗು? ನಮ್ಮ ಜೀಟ್ಟೂರೇ ಸಾಕು, ನಮಗೆ. ಆದ್ದರಿಂದ, ಅಪ್ಪಟ ಸ್ವದೇಶೀ ಇಂಗ್ಲೀಷನ್ನೇ, ನನ್ನದೇ ಆದ ಶೈಲಿಯಲ್ಲಿ ಲೀಲಾಜಾಲವಾಗಿ ಬರೆದಿದೇನೆ. ಅದನ್ನು ಎಲ್ಲರೂ ಮೆಚ್ಚಲೇ ಬೇಕು.

ಕನ್ನಡ ನುಡಿಯನ್ನೂ ಅಷ್ಟೆ. ಹೊಸಾಹೊಸ ಪ್ರಗತಿ ಶೈಲಿ; ಅಚ್ಚ ಕನ್ನಡ. ಪಂಡಿತರ ಕನ್ನಡದ ಕಾಲ ಮುಗಿಯಿತು; ನೇಗಿಲ ಯೋಗಿಯ ಕನ್ನಡವೇ ಇಂದು ನಮಗೆ ಜೀವನಾಧಾರ, ಎಂದು ಪ್ರಸಿದ್ಧ ಸಾಹಿತಿಗಳು ಹೇಳಿರುವುದನ್ನೇ ಅನುಸರಿಸಿ, ನನ್ನ ವಯಸ್ಸಿಗೆ ತಕ್ಕಂತೆ, ಭಾವವನ್ನು ಉದ್ರೇಕಗೊಳಿಸಿ, ಹಳೆಯದನ್ನು ಹಳಿದು, ಕೇವಲ ಕಿಸಾನ ಕನ್ನಡವನ್ನೇ ಉದ್ದಕ್ಕೂ ತುಂಬಿದೇನೆ.

ಅಲ್ಲದೆ, ಪ್ರತಿಹಾಳೆಯಲ್ಲೂ ಮೋಡೀ ಬರಹದಿಂದ ಪರೀಕ್ಷಕರಿಗೆ ಮೋಡಿ ಹಾಕಿದೇನೆ. ನನ್ನ ಉತ್ತರಗಳನ್ನು ಓದಿ, ಅದರಲ್ಲಿ ಯಾವುದು ತಪ್ಪು, ಯಾವುದು ಸರಿ ಎಂದು ಕಂಡುಹಿಡಿಯಲು ಯಾರಿಗೂ ಸಾಧ್ಯವೇ ಇಲ್ಲ.

ಆದ್ದರಿಂದ ಈ ಸಾರಿ ನನ್ನ ಹಣೆಯಬರಹ, ನಿಸ್ಸಂದೇಹ.

ಜೈ ಹಿಂದ್. — ರಾಮು.



# ಊನ-ಪರಿಹಾರ



★ ರೇವಣ್ಣ.

ಫೆಬ್ರುವರಿ ತಿಂಗಳಿನಲ್ಲಿ ಇಂಗ್ಲೀಷಿನವರು ನಡೆಸಿದ ಮಹಾ ಚುನಾವಣೆಯಲ್ಲಿ ಸುಮಾರು ೩೦೦ ಜನ ಲಿಬರಲ್ ಪಕ್ಷದ ಉಮೇದುವಾರರು ತಾವು ಕಟ್ಟಿದ್ದ ಡಿಪಾಜಿಟ್ ಹಣವನ್ನು (ತಲಾ ರೂ. ೨೦೦೦) ಕಳೆದುಕೊಂಡರಷ್ಟೆ. ಅವರ ಅಪಮಾನಕ್ಕೆ ನಾವು ಅಯ್ಯೋ-ಪಾಪ ಎನ್ನುವಂತಿಲ್ಲ. ಏಕೆಂದರೆ, ಅವರಲ್ಲಿ ಬಹುಮಂದಿ ಮೊದಲೇ ಲಾಯಿಡ್ಸ್ ಕಂಪನಿಯಲ್ಲಿ ವಿಮೆ ಮಾಡಿಕೊಂಡಿದ್ದರು. ಕಂಪನಿಯವರೇ ಕೈ ಕಚ್ಚಿಕೊಂಡು ಅವರಿಗೆ ತಲಾ ನಾಲ್ಕು ಸಹಸ್ರ ರೂಪಾಯಿಗಳನ್ನು ತೆತ್ತರು. ತಾವು ಒಂದು ಪಕ್ಷ ಸೋತರೆ ತಮಗೆ ಹಣ ವಾಪಸ್ ಕೊಡಬೇಕೆಂದೂ, ಗೆದ್ದರೆ ತಾವು ಕೊಟ್ಟಿದ್ದ ಪ್ರೀಮಿಯಂ ಹಣ ಕಂಪನಿಯವರದೇ ಎಂದೂ, ಅವರು ಮೊದಲೇ ಕರಾರು ಮಾಡಿಕೊಂಡಿದ್ದರು.

ಮುಂದಿನ ವರ್ಷ ನಮ್ಮ ದೇಶದಲ್ಲಿ ನಡೆಯಲಿರುವ ಮಹಾ ಚುನಾವಣೆಯಲ್ಲೂ ಕಾಂಗ್ರೆಸ್ ಪಕ್ಷದ ಉಮೇದುವಾರರೆಲ್ಲ ಇಂಥ ಕಂಪನಿಗಳ ನೆರವನ್ನು ಪಡೆಯಬಹುದು. ಇತರ ಪಕ್ಷದವರೂ ಸ್ವತಂತ್ರದವರೂ ಬೇಕಾದರೆ, ಪ್ರೀಮಿಯಂ ಕಟ್ಟಿ ಆಪದ್ಧನ ಪಡೆಯಬಹುದು. ಅಲ್ಲದೆ, ಪರೀಕ್ಷೆಗಳಿಗೆ ಕೂಡುವ ವಿದ್ಯಾರ್ಥಿಗಳೂ ಕೂಡ, ಲಾಯಿಡ್ಸ್‌ನಂಥ ವಿಮಾ ಸಂಸ್ಥೆಗಳಿಗೆ ಮೆಂಬರಾಗಿ ಕೂತು ಸೋತರೆ ಮುಂದಿನ ಸಲ ಕಟ್ಟಬೇಕಾದ ಮೊಬಲಗನ್ನಾದರೂ ಗಿಟ್ಟಿಸಿಕೊಳ್ಳಬಹುದು. ಪರದೇಶಗಳಲ್ಲಿ, ವಿಮಾನ ಹತ್ತುವ ಪ್ರಯಾಣಿಕರೆಲ್ಲರೂ, ಇಳಿಯುವುದರೊಳಗೆ ಪ್ರಾಣ ಪಕ್ಷಿ ಪಂಜರದಿಂದ ಹಾರಿಹೋದರೆ ಗತಿ ಏನು, ಎಂದು ಚಿಂತಿಸಿ, ಟಿಕೀಟಿನ ಜೊತೆಗೇ ಇನ್ಷ್ಯೂರೆನ್ಸ್ ಕಂಪನಿ ಪ್ರೀಮಿಯಂ ರಶೀತಿಯನ್ನೂ ಕಿಸೆಯಲ್ಲಿ ಭದ್ರವಾಗಿ ಇಟ್ಟಿರುತ್ತಾರೆ. ಇಲ್ಲಿ ನಾವು ಬಸ್ಸುಗಳನ್ನು ಹತ್ತುವ ಮುನ್ನ ಹೋಳೀ ಹಬ್ಬ ಇತ್ಯಾದಿ ಹಬ್ಬದ ದಿನಗಳಲ್ಲಿ ಪೇಟೆ ಕೋಟೆ ತಿರುಗಾಡುವ ಮುನ್ನ, ಹೀಗೆ ಮಾಡಬಹುದು. ಕೈ ಕಾಲು ಊನವಾದರೆ ಇಷ್ಟು ಹಣ, ಪರಂಧಾಮವನ್ನೈದಿದರೆ ಇಷ್ಟು, ಎಂದೆಲ್ಲ ಕಂಪನಿಯವರು ಗೊತ್ತುಮಾಡಿ, ಅಷ್ಟ

ಕ್ಕನುಸ್ಸು ಹೆಚ್ಚು ಕಡಿಮೆ ವಿಮಾದರ ಗಳನ್ನೇರ್ಪಡಿಸಿದಾರೆ. ಆಸ್ಪತ್ರೆಗಳಿಗೆ ರೋಗಿಗಳನ್ನು ಸೇರಿಸುವ ಮುನ್ನ ಅವರು ಸುರಕ್ಷಿತವಾಗಿ ಹೊರಗೆ ಬಂದರೆ, ಅಥವಾ ಬೇರೊಂದು ರೀತಿ ಯಾದರೆ, ಎಂದು ಇನ್ಷ್ಯೂರ್ ಮಾಡಬಹುದು. ಒಂದೊಂದು ಆಸ್ಪತ್ರೆಗೂ ವಿಮಾದರ ಒಂದೊಂದು ತೆರನಾಗಿರುತ್ತದೆ. ಸಿಟಿಬಸ್ ಹತ್ತು ವಾಗ ಪರ್ಸ್ ಕಳೆದುಕೊಂಡವರೂ ಅದರಲ್ಲಿ ಕೂತು ಪಂಚೆ ಹರಿದು ಕೊಂಡವರೂ, ಹರಿಕಥೆಗೆ ಹೋಗಿ ಚಪ್ಪಲಿ ಕಳೆದುಕೊಂಡವರೂ ಕೋರ್ಟ್ ಹತ್ತಿ ಮಾನ ಕಳೆದುಕೊಂಡ ವರೂ, ಕುದುರೆ ಬೆನ್ನು ಹತ್ತಿ ಗಂಟು ಕಳೆದುಕೊಂಡವರೂ, ವಿಮಾ ಮಾಡಿ ದ್ದರೆ, ಪರಿಹಾರ ಪಡೆಯಬಹುದಾ ಗಿತ್ತು. ಅಮೇರಿಕಾದಲ್ಲಿ ಕ್ರಾಪ್ ಇನ್ಷೂರೆನ್ಸ್ ಎಂಬ ಒಂದು ಏರ್ಪಾ ಟೆದೆಯಂತೆ, ನಾವೂ ಅದನ್ನು ಇಲ್ಲಿಗೆ ಜಾರಿಗೆ ತಂದರೆ, ಷೇವಿಂಗ್ ಸೆಲೂ ನಲ್ಲಿ ಆತನಿಗೆ ತಲೆ ಕೊಟ್ಟು, ಅವಲಕ್ಷ ಣವಾಗಿ ಹೊರಬಂದಾಗ ಅದಕ್ಕೆ ಹಣ ದ ರೂಪದಲ್ಲಾದರೂ ಪರಿಹಾರ ಸಂಪಾದಿಸಬಹುದಾಗಿತ್ತು.

ನಾಗರಿಕ ನಾಡುಗಳಲ್ಲಿ, ಸಂಗೀತ ಕಾರರು ತಮ್ಮ ಗಂಟಲನ್ನೂ, ನಾಟ್ಯ ರಾಣಿಯರು ತಮ್ಮ ಪಾದಪದ್ಮಗಳ ನ್ನೂ, ಪಿಟೀಲಿನವರು ತಮ್ಮ ಏಳು ತಂತಿಗಳನ್ನೂ ಎಂಬತ್ತು ನರಗಳ ನ್ನೂ ಇನ್ಷ್ಯೂರ್ ಮಾಡುತ್ತಾರಂತೆ. ತಮ್ಮ ಜೀವನಾಧಾರವಾಗಿರುವ ಆ ಉಪಕರಣಗಳು ಊನವಾದರೆ, ಕಂಪ ನಿಯವರು ಕೊಡುವ ಹಣದಿಂದ ಅವರು ಸುಖಜೀವನವನ್ನು ನಿರ್ಭಯ ವಾಗಿ ಮುಂದುವರಿಸಬಹುದಾಗಿದೆ.

ಅಂದ ಮೇಲೆ, ನಮ್ಮ ದೇಶದ ರಾಜಕೀಯ ಧುರಂಧರರು ತಮ್ಮ ನಾಲಗೆಗಳನ್ನೂ, ನೌಕರರು ತಮ್ಮ ಎಡಗೈಗಳನ್ನೂ, ನಾಟ್ಯ ಕಲಾ ಕೋವಿದೆಯರು ತಮ್ಮ ಸುತ್ತಳತೆ ಯನ್ನೂ, ವಿಜ್ಞಾನಿಗಳು ತಮ್ಮ ಬುರುಡೆಗಳನ್ನೂ, ಸಿನಿಮಾ ತಾರೆ ಗಳು ತಮ್ಮ ಪ್ಲೇ ಬ್ಯಾಕ್‌ಗಳನ್ನೂ, ಯುವಕ ಸಾಹಿತಿಗಳು ತಮ್ಮ ಪುಂ ಗುರುಳುಗಳನ್ನೂ ಏಕೆ ಇನ್ಷೂರ್ ಮಾಡಬಾರದು? ಉದ್ದ ಕೂದಲಿನವ ರೆಲ್ಲ ಕಲಾಜೀವಿಗಳು, ತೇಲುನೋಟ ದವರೆಲ್ಲ ಕವಿಗಳು, ಕೆಂಚ ಕಣ್ಣಿನವ ರೆಲ್ಲ ನವೀನ ಜಗತ್ ಸೃಷ್ಟಿಕರ್ತರು, ತುಂಬು ಹೊಟ್ಟೆಯವರೆಲ್ಲ ಸಮಾಜ ಸೇವಕರು-- ಎಂದು ಜನಾಂಗ ಒಪ್ಪಿ ಅವರಿಗೆ ಮನ್ನಣೆ ಕೊಡುತ್ತಿದೆ ನಿಜ. ಆದರೆ, ಆ ಕೂದಲು, ಆ ಕಣ್ಣು, ಆ ನೋಟ, ಆ ಹೊಟ್ಟೆ---ಎಷ್ಟು ದಿನ ಶಾಶ್ವತ? ಅವುಗಳಿಗೆ ರವೆಯಷ್ಟು ಊನ ತಾಗಿದರೂ, ಆಸಾಮಿಗೆ ಅಪಾಯ. ಆದರೆ, ಆ ಅಪಾಯದ ಹೊಡೆತದಿಂದ ಚೇತರಿಸಿಕೊಳ್ಳಲು ಉಪಾಯವೂ ಇದೆ. ಅದೇ ಇನ್ಷೂ ರೆನ್ಸ್ ಪದ್ಧತಿ. ಅದನ್ನೇ ನಾವು ಶರಣು ಹೋಗೋಣ.

---

# ಕಿವಿಯಿಂದ ದಾರಿ



★ ಕಾಮತ್ ★

ರಾಮಪ್ಪನಿಗೆ ಎರಡು ಕಣ್ಣೂ ಕಾಣುವುದಿಲ್ಲ. ಸುತರಾಂ ಕಪ್ಪೋತಿ. ಇಪ್ಪತ್ತು ಇಪ್ಪತ್ತೈದು ವರ್ಷದವರೆಗೆ ಚೆನ್ನಾಗಿಯೇ ಇತ್ತು ಅವನ ದೃಷ್ಟಿ. ಸೈಕಲ್ಲು ಮೇಲೆಯೇ ಭರ್ರನೆ ಓಡಾಡುತ್ತಿದ್ದ, ಮನೆ ಮನೆಗೂ ವೃತ್ತ ಪತ್ರಿಕೆಗಳು ಹಂಚುತ್ತ, ಬೆಂಗಳೂರಿನ ಸಂದುಗೊಂದುಗಳಲ್ಲೆಲ್ಲ. ಆದರೆ, ಮೂರು ವರ್ಷದ ಹಿಂದೆ ಅವನಿಗೆ ಮಾಂದ್ಯ ಬಂತು; ಹಿಂದೂ ಕೊಡುವ ಕಡೆ ಮುಸ್ಲಿಂ ಕೊಟ್ಟು ಬಿಡುವ; ಸಂದಿಗೆ ಬದಲು ಗೊಂದಿಗೆ ನುಗ್ಗಿಬಿಡುವ. ಎರಡು ವರ್ಷದ ಹಿಂದೆ, ತಡವರಿಸುವುದಕ್ಕೆ ಮೊದಲು ಮಾಡಿದ. ಕೆಸರು ತುಳಿಯುವ; ಗೋಡೆಯಂಚಿನಲ್ಲೇ ನಡಿಯುವ. ಕಳೆದ ವರ್ಷ ಸಂಪೂರ್ಣ ಕುರುಡು ಬಂತು; ಕಣ್ಣಿಗೆ ಕರೀ ಕನ್ನಡಕ ತಗುಲಿಸಿಕೊಂಡ.

ಆವರೂ, ಈಗಲೂ, ಅವನು ಪರರ ಸಹಾಯವಿಲ್ಲದೆ, ಕೋಲೂರಿಕೊಂಡು ಕೋಟೆ ಪೇಟೆ, ದಂಡು ಗಿಂಡು ತಿರುಗಾಡುತ್ತಾನೆ. "ಅದು ಹೇಗೆ ಮಾಡುತ್ತೀಯೋ, ರಾಮಪ್ಪ?" ಅಂತ ಅವನನ್ನು ಮೊನ್ನೆ ಕೇಳಿದೆ. ಅದಕ್ಕವನು, "ಸುಲಭ, ಸ್ವಾಮಿ! ಕಿವಿ ಚುರುಕಾಗಿದ್ದರೆ ಸಾಕು, ಯಾವ ರಸ್ತೆಯಲ್ಲಿ ಎಲ್ಲಿ ಎತ್ತಕಡೆ ಹೋಗುತ್ತಿದ್ದೇನೆ ಎಂದು ಗೊತ್ತು ಹಚ್ಚಿಬಿಡಬಹುದು" ಎಂದ.

"ಕೇಳಿ ಇಲ್ಲಿ! ಸಿನಿಮ ಚಿತ್ರದ ಟೀಕೆ ಮಾಡುತ್ತ ಇಂಗ್ಲೀಷ್ ಬೆರೆಸಿ, ಹುಡುಗರು ಮಾತಾಡೋದು ಕೇಳಿದರೆ, ಕೆಂಪೇಗೌಡ ರಸ್ತೆ ಅಂತ ಗೊತ್ತಾಗೋದಿಲ್ಲವೆ? ಇಂಗ್ಲಿಷ್ ಪಿಕ್ಚರ್‌ನ ಅವಲಕ್ಷಣವಾಗಿ ತಿರುಗಿಸಿದಾನೆ ಅಂತ ಟೀಕಿಸಿದರೆ, ಹಿಂದೀ ಚಿತ್ರ ಮಂದಿರ, ಹಿಂದೀ ಚಿತ್ರಾನ ಕುಲಗೆಡಿಸಿದಾನೆ ಅಂದರೆ, ತಮಿಳು ಚಿತ್ರ ಮಂದಿರ, ತಮಿಳು ಚಿತ್ರಾನ ಹಾಳುಮಾಡಿದಾನೆ ಭೂಪ ಅಂತ ವ್ಯಾಖ್ಯಾನ ಮಾಡಿದರೆ, ಕನ್ನಡ ಚಿತ್ರ ಮಂದಿರ- ಇಷ್ಟು ಸ್ಪಷ್ಟವಾಗೋದಿಲ್ಲವೆ?" ಎಂದ. "ಬಾರಯ್ಯ ಧೈರ್ಯವಾಗಿ ನಾನು ಕೆಲಸ ಕೊಡಿಸುತ್ತೇನೆ" ಅಂತ ಯಾರಾದರೊಬ್ಬರು ಬೇರೊಬ್ಬರಿಗೆ ಹೇಳುತ್ತಿರುವುದು ಕಿವಿಗೆ ಬಿದ್ದರೆ, ಮಂತ್ರಿ ಮನೆ ಬಾಗಿಲು. ಹೆಂಡದ ಅಮಲು ಹತ್ತಿ ತೊದಲುತ್ತಾ ದೊಡ್ಡವರು ಮಾತನಾಡಿ

ದರೆ ಮಾರ್ಕೆಟ್ ಚೌಕ; ಇನ್ನೇನೂ ಉಳಿಯುವ ಹಂಗಿಲ್ಲ ಅಂತ ತೋರುತ್ತದೆ, ಡಾಕ್ಟರು ಒಳ್ಳೆ ಔಷಧಿ ಕೊಡುತ್ತೇನೆ ಅಂತ ಹೇಳಿದಾರೆ, ಎಂದು ಜನ ಮಾತ ನಾಡುತ್ತಿದ್ದರೆ, ಆಸ್ಪತ್ರೆ ಬಾಗಿಲು; ಬಸ್ ಏನೂ ಬರುವ ಹಾಗೆ ಕಾಣೆ ಅಂದರೆ ಬಸ್ ಸ್ಟ್ಯಾಂಡ್; ಸೊಳ್ಳೆ ಈಚೆಗೆ ಬಹಳ ಹೆಚ್ಚಿದೆ, ಕತ್ತಲಾಗುವುದರೊಳಗೆ ಮನೆಗೆ ಹೋಗಿ ಊಟ ಮುಗಿಸಿಬಿಡಬೇಕು ಎಂದು ಆತುರವಾಗಿ ಒಬ್ಬರು ಮಾತ ನಾಡುವುದು ಕಿವಿಗೆ ಬಿದ್ದರೆ ಯಾವುದೋ ಎಕ್ಸ್ಟೆನ್ಷನ್; ಮುಂದಿನ ಪಿಕ್ಚರ್ ಯಾವುದೋ, ಎಂದು ಒಬ್ಬ ಹುಡುಗ ಮತ್ತೊಬ್ಬನನ್ನು ಕೇಳುತ್ತಿದ್ದರೆ, ಹಾಸ್ಟಲ್ ಗೇಟು; ಈಸಲ ಸಾಲದ ಕಂತು ಕಟ್ಟಲು ಸಾಧ್ಯವಿಲ್ಲವಲ್ಲಾ ಅಂತ ಪೇಚಾಡುತ್ತಿದ್ದರೆ ಜನ, ಕೋ-ಆಪರೇಟಿವ್ ಬ್ಯಾಂಕು ಬಾಗಿಲು; ಸ್ಯಾಂಕ್ಷನಾದ ಗ್ರೇಡಿಗೂ ಪೆಂಗ್ನಾಮ ಬಿತ್ತಲ್ಲೋ ಅಂತ ನಾಲ್ಕು ಜನರು ಗೋಳಾಡಿದರೆ ಅಠಾರಾ ಕಛೇರಿ ದೊಡ್ಡ ಮಹಾದ್ವಾರ;—ಹೀಗೆ ಒಂದೊಂದು ಜಾಗಕ್ಕೂ ಈ ಬೆಂಗಳೂರಲ್ಲಿ ಒಂದೊಂದು ಗುರುತು ಇಟ್ಟಿದೇನೆ, ಸ್ವಾಮಿ" ಅಂದ. "ಕತ್ತಲಾಯಿತು ಅನ್ನೋದಕ್ಕೆ ಏನಪ್ಪ ಗುರುತು?" ಅಂದೆ. "ರೂಪಾಯಿಗೆ ಒಂದು ಸೇರು; ಇಕೊ! ಮಡಗು ಕಾಸು!" ಎಂದು ಒಬ್ಬರು ಇನ್ನೊಬ್ಬರಿಗೆ ಹೇಳುತ್ತಿದ್ದರೆ, ಪೇಟೆಗೆ ಕತ್ತಲು ಕವಿಯಿತು ಅಂತ ನನಗೆ ತಿಳಿವಳಿಕೆ ಬರುತ್ತದೆ" ಎಂದ. "ಭಲಾ ಎಂದೆ, ನಾನು. ನೀವು?

——o——

ಸೆರಿಟ್ಸೆ ಖಾಮಾ ಅವನನ್ನು ವಿಲಾಯತಿಯಲ್ಲಿಯೇ ಇರುವಂತೆ ಆಜ್ಞೆ ಹೊರಡಿಸಿದ್ದಾರಂತೆ—ಅವನ ಬಿಳಿಯ ಹೆಂಡತಿ ಅವನೂರಿನಲ್ಲಿ ಇದ್ದಾಳಂತೆ.

—ಖಾಮನ ಹಬ್ಬ ಈರೀತಿ ಆಚರಿಸುತ್ತಾರೊ ಅಲ್ಲಿ....?

*　　　*　　　*

ಅಧಿ ಅಕ್ಷ ಅಂದರೆ ಅಧ್ಯಕ್ಷ ಎಂದಂತೆ. ಅಧಿ ಯಕ್ಷಿಣಿ ಎಂದರೆ ಅಧ್ಯಕ್ಷಿಣಿ ಎಂತಾದರೆ—

ಮೈಸೂರು ಕಾಂಗ್ರೇಸ್ ನವಚೇತನಗೊಳ್ಳುತ್ತದೆ—ಅಲ್ಲವೇ?

*　　　*　　　*

# ಕಲ್ಪನೆಯ ಕ್ರೂರ ಸತ್ಯ

(ಒಂದು ಕೀಳ್ಗವನ)

ಕಲ್ಪನಾ ಪ್ರಪಂಚ ಬಲು ಸೊಗಸು,
ಕಾಣದ ಕನಸು,
ನೋಡದ ನೋಟ
ಬೀಳದ ಭಾವಿ :

ಬಿಳಿ ಬಾನು, ತಿಳಿ ನೀರು,
ಪೂದೋಟ, ತಂಪು, ಪೆಂಪು, ತಂಗಾಳಿ,
ಬರಹಗಾರಗೆ ಬೀಳ್ವ ಕನಸು!
ಓಣಿ, ಔಟ್ಹೌಸು, ಗೊಂದಿಗದ್ದಲ, ದುರ್ಗಂಧ
ಅವನ ಮನೆ ನೋಡೆ!

ಬಡನಡು, ಬಟ್ಟಲುಗಳಲ್ಲಿ,
ಗಜಗಮನೆ, ಗಂಧರ್ವಗೋವೆ,
ಕಲಕಂಠೆ, ಕೋಮಲಾಂಗಿ,
ಇದುವೆ ಕವಿ ಕಾಣ್ಬ ಕನಸು
ಕನ್ಯಾಮಣಿ ಎನೆ!

ಗಜೋದರ, ಶ್ಯಾಮವರ್ಣೆ,
ಹೊರಕಣ್ಣು, ಮೊರದ ಕಿವಿ,
ಗೊಗ್ಗರ ಧ್ವನಿ, ಗೊರಕೆ ನಾಸಿಕೆ
ಅವನ ಸಹಜೀವಿನಿ!

ಗಾಯಕಮುಗ್ಧ, ಗಾನಕೋಕಿಲನೆಂಬ ಕಲ್ಪನೆ,
ಸರಿ ನೋಡೆ ಅವ ಗಾನ ಗಾರ್ದಭ!
ಬಾಯ್ಕಿವಿಗೆ ನುಗ್ಗುವುದು,
ಮೂಗು ಬಾಯೊಳು ಬಗ್ಗುವುದು,
ಅವಹಾಡೆ!

ಸುರಸುಂದರಿ, ಜಗನ್ಮೋಹಿನಿ,
ಸಿನಿಮ ತಾರೆ ಸ್ಕ್ರೀನ ಮೇಲೆ!

ಹುಳುಕು ಮುಖ, ಒಡಕು ಹಲ್ಲು,
ಮೋಟರು ಮೂಗು ಮನೆಯೊಳಗೆ!

ಸ್ತ್ರೀ ಸ್ವಾತಂತ್ರ್ಯ, ಮಹಿಳಾ ಹಕ್ಕು
ಸರಿಸಮಾನ,
ಇತ್ಯಾದಿ ಒರಲ್ವ ಪುರುಷಪ್ರಾಣಿ,
ತಾನರಿಯ ಸ್ವಾತಂತ್ರ ಸರಿಸಮಾನತೆ
ತನಗೇ ಬರಬೇಕೆಂಬುದ!
ತಾನೆ ಮನೆ ಮಾಲಿಕನೆಂಬ ಕಲ್ಪನೆ!

ಮಗ ಮಂಡೆಯ ಮೇಲೆ
ಖಾದಿ ಟೋಪಿ ಕಂಡಮಾತೆ,
ಕಾಣ್ವ ಕನಸು ಕಾರ್ಯರಂಗು, ಕಾಂಗ್ರೆಸ್ಸು, ಕ್ಯಾಬಿನೆಟ್ಟು!
ನಿಜ ಕೇಳಿ ಅವ ನೆರೆಹೋಟಲ
ಹಂಚಿಗ!

ಕಲ್ಪನಾ ಪ್ರಪಂಚ ಬಲು ಸೊಗಸು,
ಕಾಣದ ಕನಸು,
ನೋಡದ ನೋಟ,
ಬೀಳದ ಭಾವಿ!

—ಟಿ. ಸುನಂದಮ್ಮ.




ಮೂರು ವರುಷದಿಂದ ಒಂದೊಂದು ಮಗುವಿಗೂ
ಫಸ್ಟ್ ಪ್ರೈಸ್ ತೆಗೆದುಕೊಳ್ಳುತ್ತಿದ್ದಾಳೆ— ಈ ಅಡಿಗೆಯವಳು.

# ನನ್ನ ಬ್ರಾಹ್ಮಣಿಕೆ

— o —

ಇನ್ನೂ ಸ್ನಾನ ಮಾಡಿರಲಿಲ್ಲ; ಮುಖ ತೊಳೆದುಕೊಂಡು ಕಾಫಿ ಕುಡಿಯಲು ಅಡಿಗೆ ಮನೆಗೆ ಹೋದೆ. 'ಅವಳು' ಕೊಟ್ಟ ಕಾಫಿಯ ಲೋಟವನ್ನು ಎತ್ತಿ ತುಟಿಗಿಟ್ಟೆ. ನನ್ನ ಬಾಯಿಗೆ ಬಿದ್ದ ಕಾಫಿಯ ಗುಟುಕು ಅವಳ ಬುದ್ಧಿಯನ್ನು ಚುರುಕು ಮಾಡಿತು. ಅವಳೆಂದಳು: "ನೋಡಿ, ನಿನ್ನೆ ರಾತ್ರಿ ಹೇಳುವುದು ಮರೆತುಹೋಯಿತು. ಸಂಜೆ ಯಾರೋ ನಿಮ್ಮನ್ನು ಹುಡುಕಿಕೊಂಡು ಬಂದಿದ್ದರು." "ಯಾರು ? ಹೆಸರು ಕೇಳಲಿಲ್ಲವೆ?" "ಕೇಳಲಿಲ್ಲ. 'ಮನೆಯಲ್ಲಿ ಇಲ್ಲ' ಎಂದದ್ದಕ್ಕೆ, 'ನಾಳೆ ಬೆಳಗ್ಗೆ ಮತ್ತೆ ಬರುತೀನಿ' ಅಂತ ಹೇಳಿದರು. ಸೈಕಲ್ ಮೇಲೆ ಬಂದಿದ್ದರು. ನಮ್ಮ ಮನೆ ಮುಂದೆ ಹೋಗುವಾಗಲೇ ಯಾರೋ ಅವರನ್ನು 'ಶಾಸ್ತ್ರಿಗಳೇ' ಅಂತ ಕೂಗಿ ಕರೆದರು."

ಕಾಫಿ ಮುಗಿಯುವ ಹೊತ್ತಿಗೆ ಸರಿಯಾಗಿ ಹೊರಗಡೆ ಘಂಟಾನಾದವಾಯಿತು. ಶುಭಶಕುನವೇ ಆಯಿತು ಅಂತ ಎದ್ದು, ಬೀದಿಯ ಬಾಗಿಲ ಕಡೆ ಹೊರಟರೆ, ಎದುರುಗಡೆಯೇ ಬಂದ ಘಂಟೆ ಭಾರಿಸುತ್ತ ಒಂಟಿ ಬ್ರಾಹ್ಮಣ. ನಿನ್ನೆ ಬಂದಿದ್ದವನು ಈ ಸೈಕಲ್ ಶಾಸ್ತ್ರಿಯೇ ಇರಬೇಕೆಂದು ನಿಶ್ಚಯಿಸಿ, "ನಮಸ್ಕಾರ, ಬನ್ನಿ ಶಾಸ್ತ್ರಿಗಳೆ. ನಿನ್ನೆ ಸಂಜೆ ಬಂದಿದ್ದರಂತೆ, ಏನು ಸಮಾಚಾರ?" ಎಂದು ಅವರೊಡನೆ ಒಳಕ್ಕೆ ಹೋದೆ. ಅವರನ್ನ ಕೂರಿಸಿ, ಅಡಿಗೆ ಮನೆಯೊಳಕ್ಕೆ ಹೋಗಿ, "ಕಾಫಿ ಏನಾದರೂ ಉಳಿದಿದೆಯೇ ?" ಎಂದು ಅವಳನ್ನು ಕೇಳಿದೆ. ಅವಳು ಇನ್ನೂ ಕಾಫಿ ಕುಡಿದಿರಲಿಲ್ಲ. ಅದನ್ನೇ ತಂದು ಶಾಸ್ತ್ರಿಗೆ ಕೊಟ್ಟೆ. ಕುಡಿಯಲು ಅನುಮಾನಿಸಿದ. "ಹಣೆಗೆ ವಿಭೂತಿ ಬಿದ್ದಿದೆಯಲ್ಲ. ಇನ್ನು ಹೊಟ್ಟೆಗೆ ಕಾಫಿ ಬಿದ್ದರೇನು? ಪರವಾಯಿಲ್ಲ, ಕುಡಿಯಿರಿ" ಎಂದು ಹೇಳಿದ ಮೇಲೆ ಕುಡಿದ.

ಶಾಸ್ತ್ರಿಯ ಹೆಸರು "ಸೈಕಲ್ ಶಾಸ್ತ್ರಿ"ಅಂತಲೇ ಪ್ರಸಿದ್ಧಿ. ಕಚೇರಿಯಲ್ಲಿ ನಾನು ಎಂಬತ್ತು ರೂಪಾಯಿನ (ಡಿ.ಎ.ಸೂ ಸೇರಿ) ಗುಮಾಸ್ತೆ; ಅವನು ಹದಿನೆಂಟು ರೂಪಾಯಿನ ಅಟೆಂಡರು. ವೈದಿಕ ವೃತ್ತಿಯಲ್ಲೇ ಜೀವನ. ಕಛೇರಿಗೆ ಕೆಲಸ "ಪಾರ್ಟ್ ಟೈಂ ಜಾಬ್". ಅನಂತನ ಪೂಜೆ ಮಾಡಿಸಿ, ಅಠಾರಾ ಕಛೇರಿ ಹೋಗಬೇಕಾದರೆ ಸೈಕಲ್ ಇಲ್ಲದೆ ಸಾಧ್ಯವೆ? ಹೆಣದ ಹಿಂದೆಯೂ ಸೈಕಲ್. ಸಾಹೇಬರ ಹಿಂದೆಯೂ ಸೈಕಲ್. ಹೊತ್ತಿಗೆ ಸರಿಯಾಗಿ ಬರುತ್ತಾರೆ; ಅನುಕೂಲ ಸಿಂಧು; ಶಾಸ್ತ್ರಾಚಾರ ವಿಚಾರಗಳಲ್ಲಿ ಪ್ರಗತಿ ಶೀಲ; ಮಂತ್ರೋಚ್ಚಾ

ರಣಿಯಲ್ಲಿ ಮಹಾವೇಗ; ಕಾಲಕ್ಕೆ ತಕ್ಕ ಆಕಾರ—ಈ ಗುಣಗಳಿಂದ, ಬ್ರಾಹ್ಮಣಿಕೆಯ ಶಾಪದಿಂದ ಇನ್ನೂ ಬಿಡಿಸಿಕೊಳ್ಳಲಾಗದೆ ಒದ್ದಾಡುತ್ತಿರುವ ಅನೇಕ ಆಫೀಸರುಗಳ ಮನೆಗೆ, ಈ ಸೈಕಲ್ ಶಾಸ್ತ್ರಿ ಆಪದ್ಧರ್ಮ ರಕ್ಷಕ.

ಈ ಆಪದ್ಧರ್ಮ ರಕ್ಷಣೆಯ ಕಾರ್ಯದಲ್ಲಿ ಈ ಶಾಸ್ತ್ರಿ ನನ್ನ ಸಹಾಯವನ್ನು ಕೋರುವನೆಂದು ನಾನು ನಿರೀಕ್ಷಿಸಿರಲಿಲ್ಲ. ಕಾಫಿ ಕುಡಿದಾದ ಮೇಲೆ, "ಈ ಹೊತ್ತು ನಿಮ್ಮಿಂದ ಒಂದು ಉಪಕಾರ ಆಗಬೇಕಲ್ಲ" ಎಂದ. "ಏನು?" ಎಂದೆ "ನಮ್ಮ ಸೆರ್ಕ್ಲ್ ಸಾಹೇಬರ ಮನೆಯಲ್ಲಿ ಶ್ರಾದ್ಧ, ನೀವು ಬ್ರಾಹ್ಮಣರಾಗಿ ಬರಬೇಕು. ಮೂರು ವರ್ಷದಿಂದ ಬರುತ್ತಿದ್ದ ಆಸಾಮಿ ಚಕ್ಕರ್ ಕೊಟ್ಟ. ಅವರ ಮನೆಗೆ ನನ್ನ ಬಿಟ್ಟರೆ ಬೇರೆ ವೈದಿಕ ಪಿಂಡ ಸುಳಿಯುವುದಿಲ್ಲ. ನೀವು ಬದಲು ಹೇಳದೆ ಬರಬೇಕು" ಎಂದ. ಕೆಲವು ವರ್ಷಗಳ ಕೆಳಗೆ ಹೀಗೆಯೇ ಬ್ರಾಹ್ಮಣಿಕೆ ಉದ್ಧಾರ ಮಾಡುವುದಕ್ಕೆ ಹೋಗಿ, ರಾತ್ರಿ ನನ್ನ ಹೆಂಡತಿ ತಾಳಿ ಮುಟ್ಟಿನೋಡಿಕೊಳ್ಳುವ ಸಂದರ್ಭ ಒದಗಿತ್ತು. ಹೊಟ್ಟೆಗೆ ಹೋದ ಹದಿನಾರಾಣೆ ಜೀರ್ಣಿಸಿಕೊಳ್ಳಲು ಕೈಗೆ ಬಂದ ಹದಿನಾರಾಣೆಯನ್ನೂ ಕಳೆದುಕೊಂಡು, ಮೇಲೂ ಖರ್ಚು ಮಾಡಬೇಕಾಯಿತು. ಅಂದಿನಿಂದ ನಾನು ಬ್ರಾಹ್ಮಣಿಕೆ ಮಾಡುವುದು ಬ್ರಹ್ಮರಾಕ್ಷಸರಿಗೇ ಸರಿ, ನನ್ನಂತಹ ಭೂಸುರನಿಗಲ್ಲ ಎಂದು ತೀರ್ಮಾನಿಸಿದ್ದೆ. ಆದ್ದರಿಂದ ಹೆದರಿ, "ಒಲ್ಲೆ" ಎಂದೆ; "ಕಛೇರಿ" ಎಂದು ನೆಪ ಹೇಳಿದೆ. "ಇಬ್ಬರೂ ಒಟ್ಟಿಗೆಯೇ ಕಛೇರಿಗೆ ಹೋಗೋಣ, ಹೆದರಬೇಡಿ. ಶುಭ್ರದ ವಿಚಾರ ಶಂಕೆಯೇ ಬೇಡ" ಎಂದು ಏನೇನೋ ಹೇಳಿ ಕಡೆಗೂ ನನ್ನನ್ನ ಒಪ್ಪಿಸಿಯೇ ಬಿಟ್ಟ. ಶಾಸ್ತ್ರಿಯೂ ಕಾಫಿ ಕುಡಿದಿದ್ದರಿಂದ ನಾನು ಕಾಫಿ ಕುಡಿದಿದ್ದ ಪ್ರಶ್ನೆ ಹೇಳಲೇ ಇಲ್ಲ. ಶಾಸ್ತ್ರಿ ಹೊರಟ.

ಒಂಬತ್ತು ಗಂಟೆಗೆ ಸರಿಯಾಗಿ ಶಾಸ್ತ್ರಿ ಮತ್ತೆ ಹಾಜರ್. ಅಪ್ಪಟ ವೈದಿಕ ವೇಷ! ಸೈಕಲ್ ಮೇಲೇ ಬಂದಿದ್ದ! ನಾನು ವೈದಿಕ ವೇಷದಲ್ಲಿ ಬೀದಿಯಲ್ಲಿ ನಡೆದು ಹೋಗಬೇಕಲ್ಲ ಎಂದು ಅನುಮಾನಿಸಿದಾಗ, "ಕಛೇರಿ ವೇಷದಲ್ಲೇ ಬನ್ನಿ" ಎಂದ. ನಾನೂ ಗಾಬರಿಯಾಗಿ, ಹೊರಟೆ.

ಸಾಹೇಬರ ಮನೆ ತಲುಪಿದೆವು. ಹೋದ ಕೂಡಲೆ ಶಾಸ್ತ್ರಿ ನನ್ನನ್ನು ಒಂದು ಕೋಣೆಗೆ ಕರೆದುಕೊಂಡು ಹೋಗಿ, ಕಛೇರಿ ವೇಷ ತೆಗೆಯಿಸಿ, ತಾನು ಕೈಚೀಲದಲ್ಲಿ ತಂದಿದ್ದ ಶುಭ್ರ ವಸ್ತ್ರಗಳನ್ನು ಕೊಟ್ಟ. ನನ್ನ ವೇಷಪರಿವರ್ತನೆ, ವಿಭೂತಿ ಧಾರಣೆ ಆದಮೇಲೆ, ಇನ್ನೊಂದು ಕೋಣೆಗೆ ಕರೆದುಕೊಂಡು ಹೋದ. ಅಲ್ಲಿ ಸಾಹೇಬರು ಸ್ವತಃ ಹಾಜರಿದ್ದರು: ಕೋಟು, ಹ್ಯಾಟು, ಬೂಟು ಉಳಿದು, ಕಛೇರಿಗೆ ಹೋಗಲು ಸಿದ್ಧರಾಗಿ ಉಡುಪು ಧರಿಸಿದ್ದರು.

ಆ ಕೋಣೆಯಲ್ಲಿ ಒಂದು ದೊಡ್ಡ ಫೋಟೊ. ಸಾಹೇಬರ ತಂದೆಯದೆಂದು ಶಾಸ್ತ್ರಿ ಆ ಮೇಲೆ ಹೇಳಿದ. ಅದಕ್ಕೆ ಹೂವಿನ ಹಾರ ಹಾಕಿತ್ತು. ಅದರ ಮುಂದೆ ಇಬ್ಬರ ಭೋಜನಕ್ಕೆ ಬಡಿಸಿ ಸಿದ್ಧವಾಗಿತ್ತು. "ಬ್ರಾಹ್ಮಣರಿಗೆ ಆಪೋಶನ ಹಾಕಿಬಿಡಿ. ನಾನು ಹೋಗುತ್ತೇನೆ" ಎಂದು ಸಾಹೇಬರು ಹೊರಟೇ ಹೋದರು. ಫೋಟೋದಲ್ಲಿದ್ದ ಅವರ ತಂದೆಯ ಮುಖ ನನ್ನನ್ನು ದುರುಗುಟ್ಟಿ ಕೊಂಡು ನೋಡುತ್ತಿತ್ತು, ನಾನು ಎಲೆಯಮುಂದೆ ಕುಳಿತಾಗ!

ಪರಿಚಾರಕ ಬಂದು ಒಂದು ತಟ್ಟೆಯಲ್ಲಿ ಮೂರು ಪಿಂಡಗಳನ್ನೂ ಭಕ್ಷ್ಯ ಗಳನ್ನೂ ತಂದು ಫೋಟೋದ ಕೆಳಗೆ ಇಟ್ಟು, ನಮಗೆ ಬಡಿಸಲು ಮೊದಲು ಮಾಡಿದ. ಬಾಳೆ ಎಲೆ, ಬೆಳ್ಳಿಯ ತಟ್ಟೆ ಬಟ್ಟಲುಗಳು, ಇವುಗಳಲ್ಲಿ ವಿವಿಧ ಭಕ್ಷ್ಯಭೋಜ್ಯಗಳು ಮೆರೆಯುತ್ತಿದ್ದುವು. ಜಾಮೂನು, ಜಿಲೇಬಿ, ಬೋಂಡ, ಹಾಲುಖೀರು, ಹಪ್ಪಳ, ಸಂಡಿಗೆ, ವಾಂಗಿಭಾತು, ಕೇಸರಿಭಾತು, ಇತ್ಯಾದಿ ಇತ್ಯಾದಿ: ಮರೆತೆ, ಉದ್ದಿನವಡೆಯೂ ಇತ್ತು. ಶಾಸ್ತ್ರಿಯೇ ನನಗೆ ಆಪೋಶನ ಹಾಕಿ, ಊಟಕ್ಕೆ ಕುಳಿತುಕೊಳ್ಳುವ ಹಾಗೆ ಹೇಳಿ, ತಾನೂ ಕುಳಿತ. ಇನ್ನೂ ಒಂಬತ್ತೂ ಮುಕ್ಕಾಲು, ಅಷ್ಟೆ; ಬಡಿಸಿದ ಎಲೆಯನ್ನು ನೋಡಿಯೇ ನನಗೆ ಹೊಟ್ಟೆ ತುಂಬಿಹೋಯಿತು. ಸಾಲದ್ದಕ್ಕೆ ಚಿತ್ರದ ಮುಖ ಬೇರೆ. ನನ್ನನ್ನು ದುರುಗುಟ್ಟಿಕೊಂಡು ನೋಡುತ್ತಿತ್ತು: ಪಿಂಡವನ್ನು ಬಿಟ್ಟು ನನ್ನನ್ನೇ ನುಂಗಲು ಹವಣಿಸುತ್ತಿದ್ದಂತೆ ಕಂಡಿತು. ಶಾಸ್ತ್ರಿಯೇನೋ ಪರಿಚಾರಕನಿಗೆ ಬಿಡುವು ಕೊಡದ ರೀತಿಯಲ್ಲಿ ಕರ್ತವ್ಯಪರಾಯಣನಾಗಿದ್ದ.

ನನಗೋ, ಹೊಟ್ಟೆ ತುಂಬಲಿಲ್ಲ. ತುಂಬಿದ ಹಾಗೆ ಭಾವನೆ, ಅಷ್ಟೆ! ಅಂತೂ ಊಟ ಮುಗಿಯಿತು. ಮುಗಿದ ಕೂಡಲೆ, ಒಳಕ್ಕೆ ಜವಾನ ನುಗ್ಗಿದ— ಕಾಗೆ ನುಗ್ಗಿದ ಹಾಗೆ! ಕೈಯಲ್ಲಿ ಬೆಳ್ಳಿಯ ತಟ್ಟೆ ಹಿಡಿದು, ನನ್ನ ಮುಂದೆ ನೀಡಿದ: ಅದರಲ್ಲಿ ತಾಂಬೂಲ, ಹೂವು, ಗಂಧ, ಪಿಲ್ಸ್ ಸಿಗರೇಟ್ ಪ್ಯಾಕು! "ಸಂಕೋಚ ಪಟ್ಟುಕೊಳ್ಳಬೇಡಿ. ಇದೆಲ್ಲ ಇಲ್ಲಿಯ ಮಾಮೂಲು" ಎಂದು ಶಾಸ್ತ್ರಿ ನಗುತ್ತ ಹೇಳಿದ. ನಾನೂ ನಗುತ್ತ ನನಗೆ ಬೇಕಾದ್ದನ್ನು ತೆಗೆದುಕೊಂಡೆ. ಎಲ್ಲಾ ಆಯಿತು, ದಕ್ಷಿಣೆ ಮಾತ್ರ ಇಟ್ಟಿರಲಿಲ್ಲ. ಶಾಸ್ತ್ರಿಯ ಮುಖ ನೋಡಿದೆ; "ಏನಯ್ಯಾ, ಇಲ್ಲವೇ ಇಲ್ಲ?" ಎಂದೆ. ಅವನಿಗೂ ಆಶ್ಚರ್ಯವಾಯಿತು. "ಇರಲಿ, ಆ ಮೇಲೆ ಮಾತನಾಡೋಣ. ಕಛೇರಿಗೆ ಹೊತ್ತಾಗುತ್ತೆ" ಎಂದು ಎಂದು ಹೇಳಿ, ಶಾಸ್ತ್ರಿ ವೇಷ ಬದಲಾಯಿಸಿ, ಸಿದ್ಧನಾದ; ನಾನೂ ಸಿದ್ಧನಾದೆ. ಇಬ್ಬರೂ ಹೊರಟೆವು.

ಹೆಬ್ಬಾಗಿಲಿನಲ್ಲಿ ಜವಾನ ನಿಂತು, "ಸಾಹೇಬರು ನಮಸ್ಕಾರ ತಿಳಿಸಿದರು" ಎಂದು ಹೇಳಿ ನಮಗೆ ನಮಸ್ಕಾರ ಮಾಡಿದ. ನಾನು ಸಾಹೇಬರಿಗಾಗಿ ಅವನಿಗೇ

ಪ್ರತಿ ನಮಸ್ಕಾರ ಮಾಡಿದೆ. ಶಾಸ್ತ್ರಿ ನಾನೂ ಇಬ್ಬರೂ ಕಾಂಪೌಂಡು ದಾಟಿ ಹೋಗುತ್ತಿರುವಾಗ, ಜವಾನ ಹಿಂದಿನಿಂದ ಓಡಿಬಂದು, ನಮ್ಮನ್ನು ನಿಲ್ಲಿಸಿ, "ಸಾಹೇಬರು ದಕ್ಷಿಣೆ ಕೊಡು ಅಂತ ಹೇಳಿ ಕೊಟ್ಟಿದ್ದರು. ಮರೆತೇ ಹೋಗಿತ್ತು ಬುದ್ಧಿ" ಎಂದು ಇಬ್ಬರ ಕೈಗೂ ಒಂದೊಂದು ಕವರು ಕೊಟ್ಟ. "ಇದೇನು, ಆ ಶುಭ್ರಕ್ಕೆ ಬದಲು ಈ ಶುಭ್ರ" ಎಂದು ಕವರು ತೆಗೆದು ನೋಡಿದೆ—ಒಂದು ಚೆಕ್ಕು. ಐದು ರೂಪಾಯಿಗೆ! "ಈಗಿನ ಕಾಲದಲ್ಲಿ ಹೀಗೆ ಮಾಡುವವರು ಯಾರು ಸ್ವಾಮಿ—ಸಾಹೇಬರ ರೀತಿ ನೀತಿ ಹೇಗಾದರೂ ಇರಲಿ. ಶ್ರದ್ಧೆಯಿಂದ ಮಾಡುತ್ತಾರೆ. ಅದೇ ನಿಜವಾದ ಶ್ರಾದ್ಧ" ಎಂದ ಶಾಸ್ತ್ರಿ. "ಹಾಲಿನ ಲೆಕ್ಕದ ಬಾಕಿ ತೀರಿಸುವುದಕ್ಕೆ ಆಯಿತು" ಎಂದುಕೊಂಡು, "ಹೌದು" ಎಂದೆ. ಶಾಸ್ತ್ರಿ ಸೈಕಲ್ ಹತ್ತಿ ಹೊರಟ; ನಾನು ನಡೆದು ಹೋದೆ.

ರಾತ್ರಿ ತುಂಬ ಹಸಿವಾಯಿತು. ಏನು ಮಾಡಲಿ ಎಂದು ಯೋಚಿಸಿದೆ. ಯೋಚನೆಯನ್ನು ಅವಳಿಗೂ ಹೇಳಿದೆ. ಅವಳೂ ನಕ್ಕಳು. ನಕ್ಕಷ್ಟೂ ನನ್ನ ಹಸಿವು ಹೆಚ್ಚಾಯಿತು. ಅವಳ ಊಟ ಆಗಿಹೋಗಿತ್ತು. ಅಡಿಗೆ ಮಾಡಿಸಿ, ನಾನೂ ಪಟ್ಟಾಗಿ ಊಟ ಮಾಡಿಯೇ ಬಿಟ್ಟೆ! ಸಾಹೇಬರ ತಂದೆಯ ಚಿತ್ರ ಕಣ್ಣ ಮುಂದೆ ಬಂತು, ಹಾಸಿಗೆಯ ಮೇಲೆ ಮಲಗಿದಾಗ: ಆದರೆ ಮುಖ ಕೋಪಿಸಿ ಕೊಂಡಿರಲಿಲ್ಲ. ಗಹಗಹಿಸಿ ನಗುವಂತಿತ್ತು.

—ಸೀ. ವಿ. ಎಂ.

---

ಈ ಸಾರಿ ಬಜೆಟ್ ಅಧಿವೇಶನ ಯಶಸ್ವಿಯಾಗಿ ಮುಗಿಯಿತಂತೆ—

—ಹಲವಾರು ಸದಸ್ಯರು ತಮ್ಮ ತಮ್ಮ ವಾರ್ಷಿಕ ಬಜೆಟ್ಟನ್ನು ಸರಿತೂಗಿ ಸಿದರಂತೆ.

* * *

ನಿರಾಶ್ರಿತರ ಗುಂಪಿನಲ್ಲಿ ತಮ್ಮನ್ನು ಸೇರಿಸಬೇಕೆಂದೂ, ಸರ್ಕಾರ ಪರಿಹಾರ ಕೊಡಬೇಕೆಂದೂ— ರಾಜಕೀಯ ನಿರಾಶ್ರಿತರು ಕೇಳುತ್ತಿದ್ದಾರಂತೆ.

* * *

# ಜಾಣ-ಕೋಣರು

## — ಶಿಶುಗೀತೆ —

– ೧ –

ಒಂದೇ ಲಗ್ನದಿ ಆಸ್ಪತ್ರೇಲಿ
ಹುಟ್ಟಿದವೇಕ್, ದೋ, ಅಣುಗಗಳು.
ಬೆಳೆದೂ ಬೆಳೆದೂ ದಿನ ರಾತ್ರೇಲಿ
ಆದವು: ಜಾಣಾ, ಕೋಣಗಳು.

ಹತ್ತಿದ ಜಾಣನು ಮಾಜಿಸ್ಟ್ರೇಟ್;
ಕೋಣನೊ? ಮೂಲೆಯು 'ಇಂದಾಗೆ.'
ದಿನ ದಿನ ತಿನ್ನುತ ಸಾಹೆಬ್ರೇಟೆ
ರೇಗಿತು ಕೋಣಗೆ, ಚಂದಾಗೆ.

– ೨ –

ಒಂದಿನ ಕೋಪವು ಲಿಮಿಟನು ದಾಟಿ
ತಿರುಗೇ ಬಿದ್ದನು, ಹೀಟಿನಲಿ;
ಲಟ ಲಟ ಮುರಿದನು, ಜಂಬದ ಕೋಟಿ
ಜಾಣನು ಕೂತಿರೆ, ಸೀಟಿನಲಿ.

"ನಾನೂ ನೀವೂ ಕ್ಷಣವೊಂದಲ್ಲಿ
ಒಟ್ಟಿಗೆ ಹುಟ್ಟಿದ ಕರ್ಸುಗಳು.
ಗುಟ್ಟಿನ ರಟ್ಟಲೆ? ಗಡಿಬಿಡಿಯಲ್ಲಿ
ತೊಟ್ಟಿಲು ಬದಲಿಸೆ ನರ್ಸುಗಳು—

– ೩ –

ಆ ಹೊತ್ತಿಂದಲೆ ನಾನೇ ನೀವು!
ನಾನೇ ಪಾಸು; ನೀ ಫೇಲೇ!
ಇಳಿಯೋ ಬೇಗನೆ; ಅದಲ್ಲ ತಾವು;
ಇಂದಾಗೇ ನೀ ನಿನ್ಮೇಲೆ.

ಜಾಣನು ಹೆದರುತ ಗೋಣಾಗಿದ, 'ಸಾರಿ'!
ಇಳಿದನು ಗಡಗಡ ಲಜ್ಜೆಯಲಿ;
ಕೋಣನು ಕುರ್ಚಿಗೆ ಛಂಗನೆ ಹಾರಿ
ಕೇಸನು ನಡೆಸಿದ, ಸೆಜ್ಜೆಯಲಿ.

—ನಾ.ಕ.

# ವಕ್ರ ಬುದ್ಧಿ

"ವಾರಕ್ಕೊಂದು ಊಟ ಬಿಡಿ"—ಈ ಯೋಚನೆ ಪತ್ರಿಕೆಗಳಲ್ಲಿ ಪ್ರಕಟವಾಗುವುದಕ್ಕೆ ಬಹಳ ಹಿಂದಿನಿಂದಲೇ ನಾನು ವಾರಕ್ಕೊಂದು ದಿನದ ಊಟ ನಿಲ್ಲಿಸಿದ್ದೆ. ಇದಕ್ಕೆ ಕಾರಣವೇನೋ ಇತ್ತು. ನನ್ನ ಸ್ವಂತ ಸಂಪಾದನೆ ಮತ್ತು ನನ್ನ ಅರ್ಧಾಂಗಿ ನಳಿನಾಕ್ಷಿಯ ಕುಶಲತೆ, ಇವೆಲ್ಲದರಿಂದ ನಮಗೆ ತಿಂಗಳಿಗೆ ಇಪ್ಪತ್ತೈದು ದಿನವೇ ಊಟ. ನಮ್ಮ ರೇಷನ್ ಕಾರ್ಡಿನಲ್ಲಿ ಅಕ್ಕಿ ಉಳಿದಿದ್ದರೂ, ದುಡ್ಡಿನ ಅಭಾವ ಒಂದಿತ್ತಲ್ಲ. ನನ್ನ ಈಗಿನ ಉದ್ಯೋಗಕ್ಕೆ ಕಾಲಿಟ್ಟಿದ್ದಕ್ಕೆ ಕಾರಣವಾದರೂ ಅದೇ.

ನನ್ನ ಉದ್ಯೋಗ ಸಾರ್ವಜನಿಕ ಸೇವೆ; ದಿನಚರಿ ಭಾಷಣಗಳು. ಉದ್ದುದ್ದ ಭಾಷಣ ಕೊಡುವುದರಲ್ಲಿ ಸಾಕಷ್ಟು ಹೆಸರು ಗಳಿಸಿದ್ದೆ. ಅದರಿಂದಾಗಿ ಭಾಷಣಗಳಿದ್ದ ದಿನ ಊಟ, ತಿಂಡೀಗೆ ಏನೂ ಕೊರತೆ ಇರಲಿಲ್ಲ.

ಮಾಮೂಲಿನಂತೆ ನಮ್ಮ ಮೊಹಲ್ಲಾ ಮಹಿಳಾಸದನದ ವಾರ್ಷಿಕೋತ್ಸವದ ದಿನ ನನ್ನದೇ ಭಾಷಣ. ಈ ಸದನದ ಕಾರ್ಯದರ್ಶಿನಿ ಮತ್ಯಾರೂ ಅಲ್ಲ; ನಳಿನಾಕ್ಷಿಯೇ. ವಾರ್ಷಿಕೋತ್ಸವಕ್ಕೆ ನಾಲ್ಕು ದಿನ ಮುಂಚೆಯೇ Programme ಅಚ್ಚು ಮಾಡಿಸುವುದಕ್ಕೆ ನನ್ನಿಂದಲೇ ಅವಳು ಒಂದು ಪ್ರತಿ ಬರೆಸಿಕೊಂಡು ಹೋದಳು. ಮಾರನೇ ದಿವಸ ಮಾನ್ಯಮಂತ್ರಿಗಳೊಬ್ಬರನ್ನು ನೋಡೋದಕ್ಕೆ ಅವಸರವಾಗಿ ಹೊರಟಾಗ ಅಚ್ಚಾದ ಪ್ರತಿಯೊಂದನ್ನು ನನ್ನ ಕೈಗೆ ಕೊಟ್ಟಳು. ನಾನೇ ಬರೆದದ್ದು ಎಂದು ಅದನ್ನು ತಾತ್ಸಾರವಾಗಿ ಅಲ್ಲಿಯೇ ಎಸೆದು ನನ್ನ ಕೆಲಸಕ್ಕೆ ಹೊರಟೆ.

ಭಾಷಣದ ದಿನವೂ ಬಂದಿತು. ಕಾರ್ಯದರ್ಶಿನಿಯವರ ಸ್ವಾಗತ ಭಾಷಣವೂ ಪ್ರಾರಂಭವಾಯಿತು.

"ನಾನು ಈ ದಿನದ ಭಾಷಣಕಾರರನ್ನು ತಮ್ಮಗಳೆಲ್ಲರ ಪರವಾಗಿ ನಮ್ಮ ಸದನದ ವಾರ್ಷಿಕೋತ್ಸವವನ್ನು ಯಶಸ್ವಿಯಾಗಿ ನಡೆಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ. ನಿಮಗೆಲ್ಲರಿಗೂ ಆಹ್ವಾನ ಪತ್ರಿಕೆಯಲ್ಲಿರುವ ಅವರ ಹೆಸರನ್ನು ಓದಿ ಆಶ್ಚರ್ಯವಾಗಿರಬಹುದು. ಈ ಮಹನೀಯರು, ಕೆಲವು ದಿನಗಳ ಹಿಂದೆ

ರಾಜ್ಯಾಂಗದಲ್ಲಿ ನಿರೂಪಿಸಿದ 'Hindu-code bill'ಗೆ ತಮ್ಮ ಸಂಪೂರ್ಣ ಸಹಾನುಭೂತಿ ತೋರಿಸಲು, ತಮ್ಮ ಹೆಸರನ್ನು 'Mr. Nalinakshi' ಎಂದು ಮುದ್ರಣಕ್ಕೆ ಕೊಟ್ಟಿದ್ದಾರೆ. ಆದ್ದರಿಂದ ತಮ್ಮ ಆಶ್ಚರ್ಯಕ್ಕೆ ಅವಕಾಶವಿಲ್ಲ. ಈಗ ಅವರ ಭಾಷಣ."

ನನ್ನ ಮುಖವೂ ಸುಮಾರಾಗಿ ಬೆವರಿತು. ಹಾಗೂ ಹೀಗೂ Hindu code Bill ಮೇಲೆಯೇ ತೋಚಿದಷ್ಟು ಭಾಷಣಮಾಡಿ ಮುಗಿಸಿದೆ.

ಮನೆ ತಲಪಿದ ತಕ್ಷಣ ಅವಳನ್ನು ತರಾಟೆಗೆ ತೆಗೆದುಕೊಂಡೆ. ಅವಳು ಮಧ್ಯೆ ಒಂದು ಮಾತು ಹೇಳಿದಳು.

"Hindu code Billನಲ್ಲಿ 'Divorce' ಅನ್ನೋ ಪದವೂ ಇದೆ." ಘಾಬರಿಯಾಗಿ ಸುಮ್ಮನೆ ಮಲಗಿದೆ.

—ಥಂಗೂರ.

—(o)—




ಇದೇನಿದು ಮಕ್ಕಳ ಮೇಲೆ ಇಷ್ಟು ಮಮತೆ ರಾಯರೆ ? –

– ಅಯ್ಯೋ, ನಿಮ್ಮ ಹಾಗೇ ಮನೆಯವರೆಲ್ಲಾ ವಸ್ತುಪ್ರದರ್ಶನ !!

# ಅಲ್ಪಾಯುಗಳು—ಚಿತ್ರತಾರೆಯರು



—— o ——

ಮನುಜ ಶರೀರ ಸುಖವದು ಅಲ್ಪಾಯು.
ಸುಖದ ಹಿನ್ನೆಲೆ ದುಃಖವದು ಚಿರಾಯು.

ಮಲ್ಲಿಗೆಯು ಬಲು ಸೊಗಸು.
ಆದರೆ ಸೊಗಸುಗಾರನು ಬಲ್ಲ,

ಮಲ್ಲಿಗೆಯ ಕಣ್ ಸೊಂಪು ಅರೆ ರಾತ್ರಿ ಮಾತ್ರ.

ಇಂದಿನಾ ರಸವತ್ತು
ನಾಳಿನಾ ಭೀಭತ್ಸ.

ಉದುರಲೇ ಬೇಕು ರಸಭರಿತ ಹಣ್ಣುಗಳು.
ಮುದುರಲೇ ಬೇಕು, ರಸಚರಿತ ಹೆಣ್ಣುಗಳು

ಕಂದುವಳು ಹೊಸ ತಾರೆ
ಉಷೆಯು ತಾ ಬಾರೆ.

ಹೊಸತಾರೆ ಝುಲ್ ಝುಲನೇ ಗೆಜ್ಜೆಯನು ಕುಣಿಸೆ.

ಇದುವೆ ಜೀವನ ನಿಯಮ.
ಎಲೆ ತಾರೇ ! ಇದುವೇ ! ಸಮಯ !

# ಥೂಕುದಾನಿ

 

ದಾಶರಥಿ ದೀಕ್ಷಿತ್

o

ಬಹಳ ದಿನದ ಬಯಕೆ ತೀರಿದ್ದು ದೇವರಾಜ ಮಾರ್ಕೆಟ್ಟಿನ ಮೆಟ್ಟಿಲು ಹತ್ತಿ ಮುಂಬಾಗಿಲಲ್ಲಿ ಇಣಿಕಿ ಕತ್ತು ತಿರುಗಿಸಿ ಸಾಲು ಸಾಲಾಗಿ ಕುಳಿತ ಮೈಸೂರು ವೀಳೆದೆಲೆ ವ್ಯಾಪಾರಿಗಳನ್ನು ನೋಡಿದಾಗ. ಇದೇನು ಆಶ್ಚರ್ಯದ ವಿಷಯ ಎಂದು ಮೂತಿ ತಿರುವಿಬಿಡಬೇಡಿ—ಅವತ್ತಿಗೆ ನನ್ನ ಜೀವನದ ಆಸೆಗಳಲ್ಲಿ ಒಂದು ತೀರಿತ್ತು. ಮೈಸೂರು ಶಿಲ್ಕಿನ ಷರಟು—ಮೈಸೂರು ಕಡೆಯ ತೀಡಿದ ಕಚ್ಚೆ ಪಂಚೆ—ಮೈಸೂರು ರುಮಾಲು—(ಜರಿಪೇಟ) ಹಾಕಿ ಹೊರಬಿದ್ದದ್ದು ಮೈಸೂರು ಪಾಕು ಅರ್ಧ ಸೇರು ತಿಂದ ಮೇಲೆ. ಇಷ್ಟೆಲ್ಲಾ ಆದ ಮೇಲೆ ಮೈಸೂರು ವಿಳ್ಳೆದೆಲೆ ಹಾಕದಿದ್ದರೆ ಹೇಗೆ? ಮೈಸೂರೆಲೆಯ ಜೊತೆಗಾರರಾದ ಚನ್ನಪಟ್ಣದ ಸುಣ್ಣ—ತರೀಕೆರೆ ಅಡಿಕೆ—ತಿಪಟೂರು ಕೊಬ್ಬರಿ ಚೂರುಗಳು ಜೇಬಿನಲ್ಲೇ ರಾರಾಜಿಸುತ್ತಿದ್ದರು. ಸರಸರನೆ ಕಾಲು ಕಟ್ಟು ಚಿಗುರೆಲೆ ಕೊಂಡು ಸುಣ್ಣ ಸವರಿ ಮೆಯ್ಯಲುತೊಡಗಿದೆ—ಆನಂದವಾಗಿ ಮೆದಂತೆ ಅದರ ಅಮಲೇರಿ ಅದರ ಜೊತೆಗೆ ಯದ್ವಾತದ್ವ ರಸ ಉದ್ಭವವಾಗಿ ಬಾಯಿ ತುಂಬಾ ತುಂಬಿತು. ರಸದ ಒತ್ತಡದ ಫಲವಾಗಿ ಕೆಳತುಟಿಯನ್ನು ಮುಂದೆ ಹಾಯಿಸಿದೆ. ಕತ್ತು ತಾನಾಗೆ ಮೇಲೆತ್ತಿಕೊಂಡಿತು. ಎಲ್ಲಾದರೂ ಕೊಂಚ ಉಗುಳಿಬಿಡೋಣವೆಂದು ಥೂಕು ದಾನಿಯನ್ನು ಹುಡುಕತೊಡಗಿದೆ. ಹಾಗೇ ಕತ್ತಾಡಿಸಿ, ಕಣ್ಣು ಹೊರಳಿಸಿ ಹುಡುಕಲಾಗಿ ಚಿಕ್ಕದೊಂದು ಬೋರ್ಡು ಕಣ್ಣಿಗೆ ಬಿತ್ತು. ಕತ್ತು ಮೇಲೆತ್ತಿದ್ದರಿಂದ ಕುಳಿತು ಓದಬೇಕಾಯಿತು. ಅದರಲ್ಲಿ "ನೆಲದ ಮೇಲೆ ಉಗಳಬೇಡಿ, ಥೂಕುದಾನಿಯಲ್ಲೇ ಥೂಕರಿಸಿ" ಎಂದು ಬರೆದಿತ್ತು. ಪಾಪ ಅವರ ಮಾತೇಕೆ ತೆಗೆದುಹಾಕಬೇಕೆಂದು ಬಗ್ಗಿ ಉಗುಳುವುದರಲ್ಲಿದ್ದೆ. ಆದರೆ ಅದರ ಬದಿಯಲ್ಲೇ ಮುದುಡಿ ಕುಳಿತ ಬಕದಂತಹ ವ್ಯಕ್ತಿಯೊಂದು ನನ್ನನ್ನು ಆಳವಾಗಿ ಅರ್ಥ ಪೂರಿತ ದೃಷ್ಟಿಯಿಂದ ಕೋರೈಸುವಂತೆ ಆ ಕಣ್ಣು ಗುಳಿಗಳಿಂದ ನೋಡಿತು. ಹಾಗೇ ಆ ವ್ಯಕ್ತಿಯನ್ನು ನೋಡಿದೆ—ಬೋಳು ತಲೆಯ ಕಡೆ ಹೆಬ್ಬೆರಳು ಮಾಡಿ ತೋರಿಸಿತು. ನಾನು ಮುಷ್ಟಿಮಾಡಿ ಹೆಬ್ಬೆರಳು ಹಾಯಿಸಿ "ಏನು?" ಎಂದು ಕೈಯಲ್ಲಿ ಕೇಳಿದೆ.

"ಇಲ್ಲೆ ಉಗುಳಿ....ಇಲ್ಲೆ....ಇಲ್ಲೆ" ಎಂದು ಮತ್ತೆ ಮತ್ತೆ ತಲೆ ತೋರಿಸಿತು ಆ ಬಕ. ನಾನು ಗಾಬರಿಯಾಗಿ ಹುಬ್ಬು ಏರಿಸಿ ಮತ್ತೆ ಏನು ಎಂದೆ.

“ಅಲ್ಲೇನು ಇಲ್ಲೇನು....ನಾನೂ ಒಂದು ಥೂಕುದಾನಿಯೇ—ಉಗುಳಿಬಿಡಿ” ಎಂದು ತಲೆ ಮುಂದುಮಾಡಿತು. ಬಳಬಳನೆ ಥೂಕುದಾನಿಯಲ್ಲಿ ಬಾಯಲ್ಲಿನ ಎಲೆ ಅಡಿಕೆ ರಸ ಉಗುಳಿ ಆ ವ್ಯಕ್ತಿಯನ್ನು ದಿಟ್ಟಿಸಿದೆ. ದಪ್ಪ ಗಾಜಿನ ಬಿಳಿ ಬಿಳಿಯ ಸುಲೋಚನ, ಗರುಡ ಮೂಗಿನಲ್ಲಿ ನಶ್ಯದ ಪಾಕ ತೊಟ್ಟು ಹಾದಿತ್ತು. ಹಾದು ಬಂದ ಹುಳಿತ ದಂತಾವಳಿ ಕಂಡು ಗಹಗಹಿಸಿ ನಕ್ಕು, ಕೇಕೆ ಹೊಡೆದು ಬಿಟ್ಟ. ಮತ್ತೆ “ಅಯ್ಯಾ ನೀನಾರು—ಯಾವ ದೇಶ – ಏನು ಚಿಂತೆ? ಸಕ್ಕರಿ ಬೇಕೆ? ಬಟ್ಟೆ ಪರ್ಮಿಟ್ ಬೇಕೆ?—ಅಥವಾ ಮಂತ್ರಿಯಾಗ ಬೇಕೊ, ಯಾಕೆ ಈ ಪರಿಸ್ಥಿತಿ?” ಎಂದು ಕೇಳಿದೆ. ಬಲಗೈಯಿಂದ ಪಟಪಟನೆ ಹೊಟ್ಟೆ ಬಡಿದು, ಆಕಾಶ ನೋಡಿ ಬಿಸಿಸುಯ್ದು, “ಏಳಿ ಏಳಿ ಪಾಪ—ಬನ್ನೀ ಆ ಬ್ರಹ್ಮೇಂದ್ರ ಭವನಕ್ಕೆ, ಕೊಂಚ ಏನಾದರೂ ತಿಂದು, ಒಂದು ಲೋಟಾ ಕಾಫಿ ಕುಡಿಯಿರಿ ಸರಿಹೋಗುತ್ತೆ” ಎಂದೆ.

“ಹೂಂ” ಎಂದು ಕೂಡಲೆ ಎದ್ದು ಸರಸರನೆ ಹೊರಟುಬಿಟ್ಟ. ಪಾಪ, ಹೊಟ್ಟೆ ಕೆಟ್ಟದು. ಪ್ರತ್ಯೇಕ ರೂಮಿನಲ್ಲಿ ಇಬ್ಬರೇ ಕುಳಿತೆವು. ನಾಲ್ಕು ಪ್ಲೇಟು ಪೂರಿಸಾಗು, ಆರು ಉದ್ದಿನ ವಡೆ, ಮೂರು ಲೋಟ ಕಾಫಿ ಕುಡಿದ ಮೇಲಿ ತೇಗಿದ ಆಸಾಮಿ.

“ಈ ರಾಜಧಾನಿಯಲ್ಲಿ ಥೂಕುದಾನಿ ಯಾಕೆ ಆಗಲು ಪ್ರಯತ್ನಿಸುವಿರಿ. ತಾವಾರು—ಏನು ಚಿಂತೆ” ಎಂದು ಕೇಳಿದೆ.

“ಹುಟ್ಟಿದ್ದು ಹಳ್ಳದಕೇರಿ—ಬೆಳೆದದ್ದು ಬೆಳಗೊಳ—ತಾಳಿ ಜಿಗಿದದ್ದು ತೊಂಡೆಬಾವಿ ತರುಣಿ—ಮಾಡಿದ್ದು ಮನಸಿನ ಮಂಡಿಗೆ—ರಾಯರೇ, ದಕ್ಕಿದ್ದು ಥೂಕುದಾನಿ. ಏನು ಮುಖ ನೋಡ್ತೀರ? ನೀವೂ ಉಗುಳಿ. ಯಾಕೆ ಸುಮ್ಮನೆ ಎಂಜಲು ದಂಡ ಮಾಡ್ತೀರ....”

ಛೆ! ಛೆ!—ಬಿಡ್ತೂನ್ನಿ. ಇದೇನು ಹಿಂಗಂತೀರ ಬಿಡ್ತು ಅನ್ನಿ, ಸಭ್ಯರ ಕಳೆ ಮುಖದ ಮೇಲಿ—ಭವತಿ ಭಿಕ್ಷಾಂದೇಹೀಂತಲಾದರೂ ಅನ್ನಿ ಬಾಧಕವಿಲ್ಲ. ಆ ಹಾಳು ಥೂಕದಾನಿ ಮಾತ್ರ ಆಗಬೇಡ....”

“ಛ್ಛಿ ಛ್ಛಿ ಛ್ಛಿ....ಆಗೋಕೆ ನಾನ್ಯಾರು? ಬಿಡಸೋಕೆ ನೀವ್ಯಾರು?—ಯಾರೇನು ಮಾಡುವರು ಯಾರಿಂದಲೇನಹುದು. ಸೊಸೆಗೂ ಒಂದು ಕಾಲ ಬರುತ್ತೆ ಅನ್ನೋ ನಂಬಿಕೇನೆ ಇಲ್ಲದೆ ಹೋಗಿದೆ. ನೌಕರಿ ಸರ್ಕಾರದ್ದಾದರೂ ಮಾಡೋನು ನರ. ನಾಲಿಗೆಗೆ ಎಲುಬಿಲ್ಲಾಂತ ಹ್ಯಾಗಂದ್ರೆ ಹಾಗೆ ಯಾಕೆ ಹೆರದಾಡೋಕೆ ಬಿಡಬೇಕು....?....”

"ಶಾಂತಂ ಪಾಪಂ ತಾಳಿದವ ಬಾಳ್ಯಾನು—ದುಡುಕಬಾರದು.....ಆ ಅನಿಷ್ಟ ಘೂಕುದಾನಿಗ್ಯಾಕೆ ಹೋಲಿಸಿಕೊಳ್ತೀರ್ರಿ...."

"ನಾನ್ಯಾಕೆ ಸ್ವಾಮಿ ಹೋಲಿಸಿಕೊಳ್ಳಿ- ಸಾಹೇಬರು ಹೋಲಿಸಿದರು. ಪರಂಪರಾಗತವಾಗಿ ಬಂದವರೆಲ್ಲಾ ಹಳಬರನ್ನೇ ಅನುಕರಿಸಿ ನನ್ನ ಮೇಲೆ ಕ್ಯಾಕರಿಸಿದರು".

"ಕರ್ಮ, ಹೊಟ್ಟೆ ಕೆಟ್ಟದ್ದು—ಎಂದು ಮಾತ್ರ ಹೇಳಬಲ್ಲೆ...."

"ಒಪ್ಕೊಂಡೆ ರಾಯರೆ—ಹೊಟ್ಟೆ ಕೆಟ್ಟದ್ದೂಂದ ಮಾತ್ರಕ್ಕೆ ಸರ್ಕೀಟು ಹೋಪಲ್ಲೆಲ್ಲಾ ಸೌಟು ಹಿಡಿ ತಿಂದರೆ ಸಿಟ್ಟು ಬರೋಲ್ವೆ? ಆ ಸಿಟ್ಟು ತೀರಿಸಿ ಕೊಳ್ಳೊಕೆ ಒಂದು ಜುಟ್ಟೂ ನನ್ನ ಪಾಲಿಗಿಲ್ಲವೆಂದ ಮೇಲೆ—ನಾನು ಯಾವ ಘೂಕದಾಸಿಗೆ ಕಡಿಮೆ?"

"ವಿಷಯವೇನು ವಿವರಿಸಬಾರದೆ?...."

"ಸರ್ಕಾರಿ ಕೆಲಸ—ಪಿಂಚಣಿ ಮೋಹ—ಮೊನ್ನೆ ಮೊನ್ನಿನವರಿಗೆ ಕೆಲಸ ಕಚೇರಿಲೇಂತ ತಿಳಿದಿದ್ದಳು ನನ್ನಾಕೆ—ನಾನೂ ಸಿಂಪೆಸುತ್ತಿ ದಫ್ತರ ಹಿಡಿದು ಹದಿಮೂರು ವರ್ಷ ಕಚೇರಿಗೇಂತ್ಲೆ ಮನೆಯಿಂದ ಹೊರಟು—ಸಾಹೇಬರ ಮನೆ ಅಡಿಗೆ ಮನೆ ಸೇರುತ್ತಿದ್ದೆ. ಪಿಂಚಿಣಿ—ಪಿಂಚಿಣಿ ಕೆಲಸಾಂತ ನಾನೂ ವಗ್ಗರಣೆ ಹಾಕಿದೆ—ಆದರೆ ಎಷ್ಟು ದಿನಾಂತ ಹೀಗೆ ಬೇಡಿ ಹಾಕೊಂಡಿರ್ಲಿ ರಾಯರೆ!...."

"ಪಾಪ ಪಾಪ ತ್ಸೂ ತ್ಸೂ"

"ಮಾಡಿದ್ದು ಮಕ್ಕಿ ಹ್ಯಾಗೋ ಅನ್ನ ಕಾಣಸ್ತಾನಲ್ಲಾ ಅನ್ನೋ ಸ್ತ್ರೀ ಯೋಕ್ತಿಯೇ ಇಲ್ಲ ಸಾಹೇಬರ ಸಾಹೇಬರಿಗೆ."

"ಸಾಹೇಬರ ಸಾಹೇಬರು?"

"ಹೂಂ ಅವರೇ, ಇದ್ದಾರಲ್ಲಾ ಅಮ್ಮಾವ್ರು, ಅವರದೆ ಸಮಸ್ತ ಕಾರುಬಾರು. ಒಂದೊಂದು ಸಲ ಆಫೀಸು ಕಾಗದಾ ಕೂಡ ಅಮ್ಮಾವರನ್ನ ಕೇಳೇ ಹೆಬ್ಬೆಟ್ಟೊತ್ತುತ್ತಾರೆ ನಮ್ಮ ರಾಯರು....ಇದೆಲ್ಲಕ್ಕೂ ಕಾರಣ, ತೊಂಡೆಭಾವಿ ತಿಮ್ಮಪ್ಪಯ್ಯ ಮಗಳು ಕೊಟ್ಟದ್ದಕ್ಕಾಗಿ. ಅವಳು ಎರಡು ಹೊತ್ತು ಊಟ ಕಾಣಬೇಕಾದರೆ ಅಳಿಯನಿಗೆ ಸರ್ಕಾರಿ ನೌಕರಿ ಇದ್ದರೆ ಮೇಲೂಂತ ನನ್ನ ತಂದು ತಗುಲಿಸಿದ, ಈ ಚಾಕ್ರಿಗೆ ನಮ್ಮ ಮಾವ. ಮಗಳು ಮುಖ್ಯವೇ ಹೊರ್ತು ಅಳಿಯನ ಗೋಳೇನೊಂತ ಆತ ಕೇಳಲಿಲ್ಲ ನೋಡಿ."

"ನಿಮ್ಮ ಹಿತಕ್ಕೆಂತ್ಲೆ ಹಾಗೆ ಮಾಡಿರಬೇಕು ಅವರು"

"ಎಲ್ಲಾ ಅಷ್ಟೆ ರಾಯರೆ, ಅವರ ಮಗಳಿಗೆ ತಾಳಿ ಬಿಗಿಯೋಕೆ ಒಬ್ಬ ಬೇಕಿತ್ತು—ನಾನು ಸಿಕ್ಕೆ. ಸರ್ಕಾರಿ ನೌಕರೀಂತ ನನ್ನ ಮೂಗಿಗೆ ತುಪ್ಪ ಹಚ್ಚಿ ಮನೆ ಮಾಡಿ ಮಗಳನ್ನ ಬಿಟ್ಟು ಕೈ ಕೊಡವಿಕೊಂಡು ಬಿಟ್ಟ ತಿಮ್ಮಯ್ಯ—ನಾನು ತಾನೆ ಈಗ ಮನೇಲಿ—ಆಫೀಸಲ್ಲಿ ಎಸರಿಟ್ಟು ಬೆಂಕಿ ಮಾಡ್ತಿರೋನು?"

"ಮನೇಲಿ—ಆಫೀಸಲ್ಲಿ? ಹಾಗಂದ್ರೇನ್ರೀ ?...."

"ಕೇಳಿಬಿಡಿ ಹೇಳಿಬಿಡ್ತೇನೆ. ನಮ್ಮಾವ ಎಲ್ಲಾ ಹೇಳಿದ್ದೀನಿಂತ ನನ್ನ ಆಫೀಸರ ಮನೆಗೆ ಕಳಿಸಿದ. ಗಂಭೀರವಾಗಿ ಕೈಕಟ್ಟಿ ಅವರ ನಡುಮನೆಯಲ್ಲಿ ನಿಂತೆ. ಮೃದುವಾಗಿ ಕೆಮ್ಮಿದೆ. ಒಳಗಿನ ವಠಾರದಲ್ಲಿ ಕುಳಿತ ಅಮ್ಮಾವ್ರು ನನ್ನ ನೋಡಿ ಬರಹೇಳಿದರು. ಹೋಗಬಾರದಾಗಿತ್ತು—ಹೋದೆ. ಊರು, ಜಾತಿ ಕೇಳಿದರು. ನಾನು ಹೇಳಿ ಹಲ್ಲು ಗಿರಿದೆ. ತಕ್ಷಣವೆ ಮೂಲೆಯಲ್ಲಿನ ಹಗ್ಗದ ಸಿಂಬೆ, ಭಾರಿ ಎರಡು ಕೊಡ ತೋರಿಸಿ, ಬಚ್ಚಲು ಮನೆ ದಾರಿ ತೋರಿಸಿದ್ದಲ್ಲದೆ ಸಾಂಗವಾಗಿ ಸರಸರನೆ ಉಗ್ರಾಣದಿಂದ ವಗ್ಗರಣೆವರೆಗೆ ಮನೆಯ ಪ್ರತಿ ಕೆಲಸವನ್ನೂ ಹೇಳಿದರು....ಕೆಲಸ ಖಾಯಂ ಆಯಿತು. ಅಂದಿನಿಂದ ಇಂದಿನ ತನಕ ಮನೆಯಿಂದ ಆಫೀಸಿಗೆಂದೇ ಹೊರಟು ರಾಯರ ಮನೆ ಅಡಿಗೆ ಮನೆ ಆಡಳಿತ ವಹಿಸ್ಕೊಂಡು ಬಂದಿದ್ದೇನೆ ನೋಡಿ ರಾಯರೆ."

"ಪಾಪ....ಬಂಡರು ಆ ಜನ."

"ಜಗ ಭಂಡರೂನ್ನಿ. ಅವರು ಹೋಗಲಿ, ಮಾಡಿಕೊಂಡ ಹೆಂಡರೂ ನನಗೆ ಪಿಂಡಮಾಡಿ ಬಡಿಸಬಾರದೆ?—ಇದ್ದಾಳಲ್ಲ, ತಾಳಿ ಕಟ್ಟಿಸಿಕೊಂಡ ತಾಟಕಿ ತೊಂಡೆಭಾವಿ ತಿಮ್ಮಪ್ಪಯ್ಯನ ಮಗಳು—ಜಪ್ಪಯ್ಯಂದ್ರು ಎಸರಿಡೋಲ್ಲ. ಸದಾ ರೋಗಾಂತ ನರಳೋದು. ನಾನೂ ಮೊಂಡ. ಆಫೀಸರ ಮನೇಲಿ ಜೀಳಿ ಬೇಯಿಸಿದ ಮೇಲೆ, ಸ್ವಂತ ಮನೇಲೇಕೆ ಎಸರಿಡಬಾರದು?.... ಈ ಕೆಲಸಕ್ಕೆ ಸೇರೋಬದ್ಲು ಯಾವುದಾದರೂ ಉಡುಪಿ ಅಡಿಗೆಯವರ ಕೊಠಡಿ ಸೇರಿದ್ದರೆ—ಈ ಹೊತ್ತಿಗೆ ಒಂದು ಮನೆ, ನಾಲ್ಕು ಎಕರೆ ಗದ್ದೆ ತೆಗೆಯಬಹುದಾಗಿತ್ತು....ನತದೃಷ್ಟ ನಾನು."

"ಈಗಲಾದರೂ ಆ ಕೆಲಸ ಮಾಡಬಹುದಲ್ಲಾ."

"ಹದಿಮೂರು ವರ್ಷದ ಸರ್ವಿಸು ದಂಡವಾಗುತ್ತಲ್ಲಾ—ಕಡೆಗಾಲದಲ್ಲಿ ಗಂಜಿಗಾಗೋದು ಪಿಂಚಣಿ ಅಲ್ಲವೆ?"

"ನಿಮಗೆ ಧೈರ್ಯ ಬುದ್ಧಿ ಎರಡೂ ಇಲ್ಲದ್ದೇ ಈ ಪರಿಸ್ಥಿತಿಗೆ ಕಾರಣ. ದೈವ ಸಹಾಯಕ್ಕೆ ಮಾತ್ರ ನೀವು ಮೊರೆ ಹೋಗಬೇಕು. ತಿರುಪತಿಗ್ಹೋಗಿ ಹರಕೆ ಮುಟ್ಟಿಸಿಬನ್ನಿ, ಎಲ್ಲಾ ಸರಿಹೋಗುತ್ತೆ—ಇಲ್ದೆ ಇದ್ರೆ ನಾ ಹೇಳಿದಾಗೆ ಮಾಡಿ."

"ಹೇಗೆ?....ಆಗಲಿ–ತಿರುಪತಿ ಯಾತ್ರೆ ಮೂರು ಸರ್ತಿ ಆಗಿದೆ."

"ಮಾಡ್ಕೊಂಡ ಮಡದೀಗೆ ಎರಡು ಮಡಿಗಿ, ಮಾಡ್ಬಾಕು ಮೂದೇವೀಂತ ದಾರಿಗೆ ಮೊದಲು ತನ್ನಿ, ಅಲ್ಲಿಗೆ ಅರ್ಧ ಸರಿಹೋಗುತ್ತೆ."

"....ಹ್ಯಾಗೆ ಸಾಧ್ಯ....ಹೂಂ ಆಗಲಿ....ನೋಡೋಣ....ಆ ಮೇಲೆ?"

"ಕೆಲಸಕ್ಕೆ ರಾಜಿನಾಮೆ ಕೊಡಿ."

"....ಹಾಂ! ಸರ್ವೀಸು—ಪಿಂಚಣಿ!"

"ನಾ ಹೇಳೋದು ಕೇಳ್ರೀ—ಒಂದು ಖಾದಿ ಜುಬ್ಬ, ಒಂದು ಖಾದಿ ಪಂಚೆ, ನೆಹರೂ ಬನೀನು, ನಾನು ಹೊಲಿಸಿ ಕೊಡ್ತೇನೆ. ಮಿರಿಮಿರನೆ ಗಂಜಿ ಹಾಕಿ ಇಸ್ತ್ರಿ ಮಾಡಿದ ಗಾಂಧಿ ಟೋಪಿ ವಾರೆಯಾಗಿ ಹಾಕಿ ಊರೆಲ್ಲಾ ಪ್ರದಕ್ಷಿಣೆ ಹಾಕಿ. ರೈಲ್ವೆ ಸ್ಟೇಷನ್‌ಗೆ ಪ್ರತಿ ನಿತ್ಯ ಭೇಟಿಕೊಟ್ಟು, ಪರಸ್ಥಳಗಳಿಂದ ಬರುವ ವ್ಯಾಪಾರ ಸೆಟ್ರುಗಳು, ಸೇಟ್ಜಿಗಳನ್ನು ಹಿಡಿಯಿರಿ. ಸೂಕ್ಷ್ಮವಾಗಿ ಪರಿಶೀಲಿಸಿ, ಅವರಿಗೆ ಯಾವ ಪರ್ಮಿಟ್ಟು ಬೇಕು ಪತ್ತೆ ಹಚ್ಚಿ. ೧೯೪೨ರಲ್ಲಿ ಜೈಲಿನಲ್ಲಿದ್ದೆನೆಂದೂ ಮಂತ್ರಿಗಳೆಲ್ಲಾ ಸಹ ಜೈಲಿಗಳಾದ್ದರಿಂದ ಪರ್ಮಿಟ್ಟು ಕೊಡಿಸುವುದಾಗಿ ಅಭಯ ಹಸ್ತ ನೀಡಿ. ಮುಂದಿನ ಮಾರ್ಗ ದೇವರು ತೋರಸ್ತಾನೆ."

"....ಉಸ್ಸಪ್ಪ, ರಾಯರೆ! ಇದು ನಿಜವಾಗಲೂ ಈ ಥೂಕದಾನಿ ಕೈಲಿ ಆಗೋ ಕೆಲಸವೆ? ಕೇವಲ ಈ ಕಾಡು ಕೂಸನ್ನು ಕಣ್ಣು ಕಟ್ಟಿ ಭಾವಿಗೆ ದೂಡಿ ಆಳ ನೋಡುವ ಗೋಜಿಗೆ ಹೋಗಬೇಡಿ."

"....ಹೋಗಿ ಹೋಗಿ ನಿಮ್ಮ ಹಣೇಬರ. ದಾರಿ ತೋರ್ಸಿದರೂ, ತಲೆ ಮ್ಯೇಲೆ ಕೈ ಹೊತ್ತುವ ಹೇಡಿಹಾಗೆ ಯಾಕ್ರಿ ಬದುಕಬೇಕು. ಹೋಗಿ ತೊಲಗಿ, ಅಡಿಗೆಯವನಿಗ್ಯಾಕೆ ಅಂತಸ್ತಿನ ಮನೆ. ವಗ್ಗರಣೆ ಕೊಡು ಹೋಗಿ—ಥೂ ಥೂ ಥೂ ಥೂ" ಎಂದು ರೇಗಿ ಹೋಟಲಿಂದ ಹೊರಬಿದ್ದೆ. ಅಚ್ಚ ಮೈಸೂರಿನ ಸಕಲ ಸೌಭಾಗ್ಯದ ಸೊಗಸುಗಳನ್ನೂ ಅನುಭವಿಸಿದ ಮೇಲೆ ಈ ಥೂಕದಾನಿಯ ದರ್ಶನವಾದದ್ದು. ಈ ಪ್ರಾಣಿ ನನ್ನ ಸಲಹೆಗೆ ಧೈರ್ಯದಿಂದ ಹೂಂಗುಟ್ಟಿ ದಿದ್ದು ಮನಸ್ಸಿಗೆ ಬೇಜಾರು ಮಾಡಿತು. ಕರಿದ ಶ್ಯಾವಿಗೆ ಕೀರಿಗೆ, ಬಾದಾಮಿ ಕೇಸರಿ ಹಾಕಿ ಹದವಾಗಿ ಕಾಸಿದ ಮೇಲೆ ವಗ್ಗರಣೆ ಕೊಟ್ಟ ಹಾಗಾಯಿತು ನನ್ನ

ಸ್ಥಿತಿ. ಮತ್ತೆ ಮೊದಲಿನ ಮನೋಸ್ಥಿತಿ ಬರಲಿಕ್ಕೆ ಮೈಸೂರುಪಾಕು ತಿಂದು ಮೈಸೂರು ಚಿಗುರೆಲೆ ಅರ್ಧ ಕಟ್ಟು ಮೆಯ್ಯಲೇ ಬೇಕಾಯಿತು. ಮೆಯ್ದು ಮನೆ ಸೇರಿದೆ.

* * *

ನಾಲ್ಕು ವರ್ಷಗಳ ನಂತರದ ಮಾತು. ನಾನು ಹಾಗೇ ವರಾಂಡದಲ್ಲಿ ಅಡ್ಡಾಡುತ್ತಾ ನಾಳಿನ ಅಕ್ಕಿಗೆ ಮಾರ್ಗ ಹುಡುಕುತ್ತಿದ್ದೆ. ವೇಗವಾಗಿ ಬಂದ ಮರ್ಕ್ಯುರಿ ಲೇಟೆಸ್ಟ್ ಕಾರೊಂದು ನಮ್ಮ ಮನೆ ಮುಂದೆ ನಿಂತಿತು. ಯಾರಪ್ಪ ನಮ್ಮ ಮನೆಗೆ ಬಂದವರು ಎಂದು ಆಶ್ಚರ್ಯದಿಂದ ನೋಡಿದೆ. ಖಾಕಿ ಸಮ ವಸ್ತ್ರಧಾರಿ ಡ್ರೈವರ್ ಇಳಿದು ಕಾರು ಬಾಗಿಲು ತೆಗೆದ. ರೇಷ್ಮೆ ಜರಿ ಪಂಚೆ, ಕರಿ ಸಿಲ್ಕಿನ ಷೇರ್ವಾನಿ ಗೇಣು ಅಂಚಿನ ಮುಗುಟ – ತುಂಬು ಜರಿಪೇಟ, ಫಳ ಫಳನೆ ಹೊಳೆಯುವ ಕಿವಿಖಡಕು. ಐದು ಬೆರಳಿಗೆ ಹತ್ತು ಉಂಗುರ. ಬೆಳ್ಳಿ ಹಿಡಿಯ ಕೋಲು ಹಿಡಿದು ಬಂಗಾರದ ಕಟ್ಟಿನ ಕನ್ನಡಕದಲ್ಲಿ ನೋಡುತ್ತ "ನಮಸ್ಕಾರ" ಎಂದು ಆಗರ್ಭ ಶ್ರೀಮಂತ ವ್ಯಕ್ತಿ ಕಾರಿನಿಂದ ಇಳಿದು ಬಂತು. ಹಿಂದೆಯೇ ಪಟ್ಟಾವಳಿ ಸೀರೆ ನಾಕು ನಾಕು ಜೊತೆ ಬಂಗಾರದ ಬಳೆ ಎರಡೆರಡು ಗೋಪಿನ ಸರ, ಥಳಥಳಿಸುವ ಮೂಗುಬೊಟ್ಟು, ಫಳಫಳಿಸುವ ಬೆಂಡೋಲೆ ಧರಿಸಿದ ಮಧ್ಯವಯಸ್ಸಿನ ಮುತ್ತೈದೆ ಕೈಯ್ಯಲ್ಲಿ ಮುಚ್ಚಿದ ಬೆಳ್ಳಿ ತಟ್ಟೆಯೊಡಗೂಡಿ ಕಾರಿನಿಂದ ಇಳಿದು ಬಂತು. "ಬನ್ನಿ ಬನ್ನಿ" ಎಂದು ಸ್ವಾಗತಿಸಿ ಕೂಡಿಸಿದೆ. ಆ ಮುತ್ತೈದೆಯನ್ನು ನನ್ನಾಕೆ ಒಳಕ್ಕೆ ಕರೆದುಕೊಂಡು ಹೋದಳು. "ಗುರ್ತು ಸಿಕ್ಕಲಿಲ್ಲವೆ? ನಾನು ಭೀಮರಾವ್" ಎಂದರು ಆ ಶ್ರೀಮಂತರು. "ಭೀಮ ರಾವ್?....ಹ್ಞ ಹ್ಞ....ನೆನಪಿಗೆ ಬರಲಿಲ್ಲ" ಎಂದು ತಲೆ ಕೆರೆದುಕೊಂಡೆ. ಬಹಳ ಸಂಕೋಚದ ಮುಖಮಾಡಿ ಅವರು "....ದೇವರಾಜ ಮಾರ್ಕೆಟ್ಟು—ಥೂಕದಾನಿ" ಎಂದೊಡನೆ ಎಲ್ಲಾ ನೆನಪಿಗೆ ಬಂದು "ಹ್ಹೊ ಹ್ಹೊ ಹ್ಹೊ....ನೀವೂ...." ಎಂದು ಡಂಗಬಡಿದು ತಳಮಳಿಸಿಹೋದೆ. ಆ ಜೋಳತಲೆ ಎಲ್ಲಿ, ಈ ಜರಿ ಪೇಟವೆಲ್ಲಿ, ಆ ಹುಳಿತ ದಂತಾವಳಿ ಎಲ್ಲಿ, ಈ ಬಂಗಾರದ ಹಲ್ಲು ಕಟ್ಟಡವೆಲ್ಲಿ! ಅಜಗಜ ಪಾತಾಳ! ಆಕಾಶ! "ಪರಮಾಶ್ಚರ್ಯ ಇದೇನು ಈ ಮಾರ್ಪಾಟು—ಹೇಗೆ!" ಎಂದು ಬೆನ್ನು ತಟ್ಟಿದೆ.

"ಎಲ್ಲಾ ನಿಮ್ಮ ದಯ ದೇವರು. ಅವತ್ತು ಬ್ರಹ್ಮೇಂದ್ರ ಭವನದಲ್ಲಿ ನೀವು ರಾತ್ರಿ ಒಂಭತ್ತರವರಿಗೆ ಕೊಟ್ಟ ಉಪನ್ಯಾಸದ ಫಲ. ಕರ್ಮ ಸವೆದು ಉಷಃಕಾಲದಲ್ಲಿ ವಸಂತೋತ್ಸವ ಸಮಯದಂತೆ ಇದ್ದೀನಿ ಈಗ."

"ಭಲಾ ಎಂಥಾ ಸವಿಮಾತು. ಈ ಮಾರ್ಪಾಟು ಆದದ್ದು ಹೇಗೆ ಹೇಳ ಬಾರದೆ ಥೂಕುದಾನಿರಾವ್—ಛೆ! ಉಘೆ ಭೀಮರಾವ್....ಕಡೆಗೂ ಆ ಪಿಂಚಣಿ ಕೆಲಸದಿಂದ ಕೊಸರಿಕೊಂಡು ಕೀರ್ತಿಪಡೆದಿರಲ್ಲಾ...."

“ಅದೊಂದು ವಿಚಿತ್ರ ಪರಿಸ್ಥಿತಿ ನನ್ನ ಆ ಸಾಹೇಬರು—ಆ ಅಮ್ಮಾವರಿಂದ ಪಾರುಮಾಡಿತು. ದೈವ ಸಹಾಯವೇ ಕಡೆಯ ಮಾರ್ಗ ಎಂದು ತಾವು ಹೇಳಿದ್ದು ಕಿವಿಯಲ್ಲಿ ಮೊರಗುತ್ತಿತ್ತು. ಕಡೆಯದಾಗಿ ಥೂ ಥೂ ಎಂದು ಹೋದದ್ದು ನನಗೆ ನಾಚಿಕೆ ಮಾಡಿಸಿತು. ಈ ರಾಜಧಾನಿಯಲ್ಲಿ ಥೂಕುದಾನಿಯಾಗೋದೊಂದ್ರೆ ಬುದ್ಧಿಯಿಲ್ಲದ್ದು ಎಂದದ್ದು ನನ್ನ ಎದೆ ಇರಿಯಿತು. ಅದೇ ಚಿಂತೆಯಲ್ಲಿ ರಾಯರ ಮನೆ ಸೇರಿದಾಗ ರಾತ್ರಿ ಹತ್ತು ಗಂಟೆ. ಹಸಿದ ಹುಲಿಗಳು ಮೇಕೆಯನ್ನು ನೋಡಿದಂತೆ ನನ್ನ ನೋಡಿದರು. ಆ ಸಾಹೇಬ ದಂಪತಿಗಳು—ಮೊದಲೇ ಉಗಿಯುವವರು ಇನ್ನು ಬಾಯಲ್ಲಿ ಎಂಜಲು ಸೇರಿದರೆ ಕೇಳಬೇಕೆ. ನನ್ನ ಉಗಿದು ಉಪ್ಪು ಹಾಕಿದರು ಅಮ್ಮಾವರು. ಮನೇಲಿ ಕಾಳು ಅಕ್ಕಿ ಇರಲಿಲ್ಲ, ರೇಷನ್‌ಕಾಲ. ನನ್ನ ಕೈಗೊಂದು ಚೀಲ ಒಂದು ರೂಪಾಯಿ ಕೊಟ್ಟು “ಅಕ್ಕಿ ತಂದು ಅಡಿಗೆ ಮಾಡಿ ಬಡಿಸು” ಎಂದು ಆ ರಾತ್ರಿಯಲ್ಲಿ ನನ್ನ ಅಟ್ಟಿದರು. ಆ ಕೊರೆಯುವ ಛಳಿಯಲ್ಲಿ ನನ್ನ ದೂಡಿದರು ಆ ದಂಪತಿಗಳು.”

“ಪಾಪಿಗಳು....ಆ ಮೇಲೆ?”

“ಕಣ್ಣೀರು ಸುರಿಸುತ್ತಾ ಆ ಕಗ್ಗತ್ತಲಲ್ಲಿ ಹೊರಟೆ. ಎಲ್ಲಿಗೆ ಹೋಗಲಿ, ಏನು ಮಾಡಲಿ—ಅಕ್ಕಿ ಎಲ್ಲಿಂದ ತರಲಿ! ದುಃಖ ಉಕ್ಕೇರಿ ಬಂತು. ಥೂ ಥೂ ಎಂಬ ನಿಮ್ಮ ಥೂಕರಿಕೆ ಶೂಲದಂತೆ ಇರಿದಂತಾಯಿತು ಮತ್ತೆ. ಛೆ, ಇನ್ನಿರಬಾರದು ಈ ಜೀವ ಎಂದು, ಸಾಯಲಿ? ಎಂದು ಯೋಚಿಸಿದೆ.”

“ಸತ್ತುಬಿಟ್ಟಿರಾ....ಊ ಛಿ ನಾನ್ನೋಡಿ ಎದುರಿಗೆ ಕೂತಿದ್ದೀರಾ ಸತ್ತರಾಂತ ಕೇಳ್ತೀನೆ....ಹೂಂ ಆ ಮೇಲೆ?”

“ನೇರವಾಗಿ ನಡೆದು ಮಂಡಿಪೇಟೆ ಸಂದು ಸೇರಿದೆ. ಏನೂ ತೋಚದೆ ಬರಿಯ ಗೋಡೆಗೆ ಒರಗಿ ಹಾಗೇ ನಿದ್ರೆಹೋದೆ.”

“ಆ ಛಳಿ ರಾತ್ರೀಲಿ ಹೊರಗಡೆ....ಕರ್ಮ”

“ಹೂಂ ಕೇಳಿ—ಮಧ್ಯರಾತ್ರಿ ಹೊತ್ತಿಗೆ ಯಾರೋ ತಟ್ಟಿ ಎಬ್ಬಿಸಿದರು. ಕಣ್ಣರಳಿಸಿದಾಗ ಎದುರಿಗಿದ್ದ ಆಜಾನುಬಾಹು “ವ್ಯಾಸೋಜೀ—ಹಿಡಿ—ತಿಟ್ಟನಕೆರೆ—ಆರನೆ ತಾರೀಖು ಗಾಡಿ ಅಲ್ಲೇ ಇರುತ್ತೆ— ಲಾರಿ ತರೋದು ನಿನ್ನ ಭಾರ, ಹುಷಾರ್ ಹುಷಾರ್” ಎಂದು ಕೈಯ್ಯಲ್ಲಿ ಭಾರಿ ಕಟ್ಟು ನೋಟಿಟ್ಟು ಮಾಯವಾಯಿತು. ಆ ವ್ಯಕ್ತಿ ಜೀಪಿನಲ್ಲಿ ಬಂದಿತ್ತು. ಗಾಬರಿಯಿಂದ ಕೈಲಿ ಕಂತೆ ನೋಟು ಹಿಡಿದು ಅವಕ್ಕಾಗಿ ನಿಂತೆ. ಅಷ್ಟೊಂದು ನೂರು ರೂಪಾಯಿನ ನೋಟು ನೋಡಿದ್ದು ಹಿಡಿದಿದ್ದು ಅವತ್ತೆ ಮೊದಲು. ನನ್ನ ಯಾರೆಂದೋ ತಿಳಿದು ನೋಟು ಕೊಟ್ಟಿರಬೇಕು. ಏನೋ ಅಚಾತುರ್ಯ ನಡೆದಿದೆ ಎಂದು ಹಾಗೇ ಮತ್ತೆ ಕುಳಿತೆ. ದೂರದಿಂದ ಎರಡು ವ್ಯಕ್ತಿಗಳು ಕರೀ ಕಂಬಳಿ ಹೊದ್ದು

ನನ್ನ ಕಡೆಗೇ ಬರುತ್ತಿದ್ದುದು ಕಂಡೆ. ಹಾಗೇ ಸರಿದು ಮರೆಯಾಗಿ ಅವಿತು ಕೊಂಡೆ. ಹಾಗೇ ಅವರ ಸಂಭಾಷಣೆ ಕೇಳತೊಡಗಿದೆ.

"ಇನ್ನೂ ಬಂದಿರಕಿಲ್ಲಾಂತೀಯ ತಿಮ್ಮಣ್ಣ"

"ಬಂದಿರಕಿಲ್ಲ ವ್ಯಾಸೋಜಿ...." ನನ್ನ ಕಣ್ಣು ಕತ್ತಲು ಗುಡಿಸಿತು. ನನ್ನನ್ನು ವ್ಯಾಸೋಜಿ ಎಂದೇ ತಿಳಿದು ನೋಟಿನ ಕಟ್ಟು ಕೊಟ್ಟು ಹೋದದ್ದು ಅರ್ಥವಾಯಿತು.

"ತಿಮ್ಮಣ್ಣಾ, ದಬಾಸ್‌ಪೇಟೆ ಲಾರಿ ಬಂದಿದ್ದಾತು. ಹತ್ತು ಸಾವಿರದ್ದೈನೂ ರಕ್ಕೆ ಲಾರಿ ಲಾರಿಗೆ ಗುತ್ತಿಗೆ ಕೊಟ್ಟೆ—ಹರಿಹರದ ಹೊಳೆ ತಡಾಯಿಸಿದರೆ ಸಾಕು ಹರಪನಹಳ್ಳಿ ಗಡಿ ಸೇರಿಸೋದು ನನ್ನ ಭಾರ."

"ವ್ಯಾಸೋಜೀ........ನಾನು ನೆಲಮಾಳಿಗೆಗೆ ಹೋಗಿಬರ್ತೀನಿ—ನೀನು ಇನ್ನೂ ಕಾದಿರು. ತಡವಾದರೆ ತಿಟ್ಟಿನ ಕೆರೆಗೆ ನಾಳೆ ಬಂದುಬಿಡು. ಇನ್ನೇನು ಬಂದುಬಿಡಬಹುದು—ಅ ಗಿರಾಕಿ ಬಂದಿರಬೋದು ನಾನು ಹೋಗ್ತೀನಿ" ಎಂದು ಒಂದು ಇಸಮ್ಮು ಮಾಯವಾಯಿತು. ವ್ಯಾಸೋಜಿಯ ಹುರಿಮೀಸೆ ಆ ಪೈಲ್ವಾನ ವ್ಯಕ್ತಿತ್ವ ಕಂಡು ಕತ್ತರಿಸಿದೆ. ಕಂತೆ ನೋಟಿನೊಡನೆ ಇವನ ಕೈಗೆ ಸಿಕ್ಕರೆ ನನ್ನ ಶಿರವ ಚಂಡಾಡುವುದರಲ್ಲಿ ಸಂಶಯವಿಲ್ಲ. ಆ ಮಹಾನುಭಾವ ಇಲ್ಲೇ ಕಾದಿರುವನು. ಜಾಗಾಬಿಟ್ಟು ಕದಲೋ ಹಾಗಿಲ್ಲ—ಯೋಚಿಸಿ ಯೋಚಿಸಿ ವ್ಯಾಸೋಜಿಯ ವಾಮಪಾದ ಹಿಡಿದು ನೋಟು ಕಂತೆ ಒಪ್ಪಿಸಿ ದಕ್ಕಿದಷ್ಟು ಮುಕ್ಕಿ ಪಾರಾಗುವ ಯೋಚನೆ ಮಾಡಿದೆ."

"ಹಾಗ್ಯಾಕೆ ಮಾಡಿದಿರಿ, ಹಾಗೇ ತಪ್ಪಿಸಿಕೊಂಡು ಹೋಗಿ ಅಷ್ಟನ್ನೂ ದಕ್ಕಿಸಿಕೊಳ್ಳಬಾರದಾಗಿತ್ತೆ?...."

"....ದೇವರು ಮಾರ್ಗ ತೋರಿಸಿದ ನೋಡಿ. ಹಾಗೆ ಮಾಡದಿದ್ದಲ್ಲಿ ಅಷ್ಟಕ್ಕೇ ಮುಗಿದು ವ್ಯಾಪಾರದ ಜಾಡೇ ಸಿಕ್ಕುತ್ತಿರಲಿಲ್ಲ...."

"ವ್ಯಾಪಾರ! ಅಂಗಡಿ ಇಟ್ರೇನು ಆಮೇಲೆ?"

"ಹೂಂ—ಕೇಳಿ ಹಾಗೇ ಅತ್ತಿಂದ ಇತ್ತ ಓಡಾಡುತ್ತಿದ್ದ ವ್ಯಾಸೋಜಿಯ ಕಾಲ ಮೇಲೆ ಕಂತೆ ನೋಟು ಹಾಕಿ, ಕಾಪಾಡಬೇಕು ದೇವರೂ" ಎಂದು ಬೇಡಿದೆ. ಚಕಿತನಾಗಿ ಭಯಗೊಂಡವನಂತಾಗಿ ಪೋಲೀಸು C.I.D.ಯೋ ಎಂದು ಶಂಕಿಸಿದ. "ಯಾರು ನೀನು—ಇದೇನು?" ಎಂದು ಗುಟುರು ಹಾಕಿದ ಮೀಸೆ ತಿರುವುತ್ತ. ನಾನು "ಇದೊಂದು ಘೂಕುದಾನಿ, ದಿಕ್ಕಿಲ್ಲದ ಗೂಬೆ ಮರಿ.

ಒಂದೆರಡು ಸೇರು ಅಕ್ಕಿ ಕೊಡಿಸಿ, ನನ್ನ ಕಡೆಗಾಲದ ಪಿಂಚಣಿ ಉಳಿಸಿಕೊಡಿ—ಕಾರಲ್ಲಿ ಬಂದವರು ನೀವೆಂದೇ ತಿಳಿದು ನನಗೆ ಈ ನೋಟು ಕಂತೆ ಕೊಟ್ಟರು. ಅಲ್ಲ ಎನ್ನುವುದರಲ್ಲೇ ಜೀಪು ಹೋಗಿತ್ತು....ಸ್ವಾಮಿನ್ ಜಿಕ್ಕಿ ಬೇಡಿದ ಮಕ್ಕಳೇ ಬದುಕೋಲ್ಲ, ಬ್ಲಾಕ್ ಮಾರ್ಕೆಟ್ ಮಕ್ಕಳಲ್ಲಿ ಬಚಾವ್ ಆದಾವು. ಕಂಡವರೊಡವೆ ಬೇಡ ಎರಡು ಸೇರು ಸಣ್ಣಕ್ಕಿ ಕೊಡಿಸಿ, ಪಿಂಚಣಿ ಉಳಿಸಿ...." ಎಂದು ಅಂಗಲಾಚಿದೆ. ವ್ಯಾಸೋಜಿ ಏನು ಮಾಡಿದ ಗೊತ್ತೆ?

"ಏನು ಮಾಡಿದ....ಹೇಳಿ ಭೀಮರಾವ್"

"ಮಂಡಿ ಊರಿ ಕುಳಿತ ನನ್ನ ಷರಟಿನ ಮುಂಬದಿಯನ್ನು ಮಡಿಸಿ ಮುಷ್ಟಿ ಹಿಡಿದು, ಎತ್ತಿದ ನನ್ನ ಮುಖವನ್ನು ಆಳವಾಗಿ ಪರೀಕ್ಷಿಸಿ, "ದೇವರು ಪ್ರತ್ಯಕ್ಷವಾದಾಗ ಒಂದು ಸಿಗರೇಟು ಕೇಳಿದಂತಾಯಿತು ನೀನು ಕೇಳಿದ್ದು" ಎಂದು ಒಂದೇ ಬಾರಿಗೆ 'ಢ್ಯೊಂ' ಎಂದು ನನ್ನ ಕೆಳಗಡ್ಡಕ್ಕೆ ಸಿನಿಮಾದಲ್ಲಿ ಗುದ್ದುವಂತೆ ಗುದ್ದಿಬಿಟ್ಟ. ನಾನು ಹಾ! ಎಂದು ಮೂರ್ಛೆ ಹೋದೆ.

"ರಾಮ ರಾಮ....ಗ್ರಹಚಾರ ಆ ಮೇಲೆ?"

ಆ ಮೇಲೆ ಮೂರ್ಛೆ ತಿಳಿದೆದ್ದಾಗ ಆ ಗುದ್ದಿಗೆ ನನ್ನ ಹಾದ ಹುಳಿತ ಹಲ್ಲೆರಡು ಉದುರಿಹೋಗಿದ್ದುವು. ನಾನು ಗುಡಿಸಲೊಂದರಲ್ಲಿ ಮಂಚದ ಮೇಲೆ ಮಲಗಿದ್ದೆ. ಅದೊಂದು ಕಾಡು, ಯಾವ ದೇಶವೋ ಶಿವನೇ ಬಲ್ಲ. ವ್ಯಾಸೋಜಿ ಮತ್ತೆ ಬಂದ. ನಾನು ಮತ್ತೆ ಮೂರ್ಛೆ ಹೋಗುವುದರಲ್ಲಿದ್ದೆ. ಅವನ ಹಸನ್ಮುಖ ಅಭಯ ಹಸ್ತ ನೋಡಿ ತಡೆದುಕೊಂಡೆ....ಆ ದಿನ ಮೊದಲ್ಗೊಂಡು ನನ್ನ ಜೀವನ ಜೇನಾಯಿತು."

"ಅಂದರೆ?...."

"ಮುರಿದ ಹಲ್ಲಿಗೆ ಬದಲಾಗಿ ಬಂಗಾರದ ಹಲ್ಲು ಬಂತು. ಬೆಳೆದ ಗಡ್ಡ ಬೋಳಿಸಿ ಮೀಸೆ ಹುರಿಮಾಡಿಸಿದರು. ದಾರದ ಕನ್ನಡಕ ಸುಟ್ಟು, ಚಿನ್ನದ ಸುಲೋಚನ ಕೊಟ್ಟರು. "ಇದೆಲ್ಲಾ ಯಾಕೆ ವ್ಯಾಸೋಜಿ" ಎಂದಾಗ, "ನೀನು ನಮ್ಮವನೆ—ಸಾಚಾ ಮನುಷ್ಯ ನಮ್ಮ ಗುಂಪಿಗೆ ಸರಿಯಾದವ" ಎಂದೆನ್ನುವ. ಮೊದಲು ಅವರ ಪ್ರಪಂಚದ ಪಂಚಮ ದಳಕ್ಕೆ ಸೇರಿಸಿದರು. ಸಂಬಳ ನೂರು ರೂಪಾಯಿ ಅಂದರು...."

"ನಿಮ್ಮ ಕೆಲಸವೇನು?...."

“ಒಳಗುಟ್ಟು ನಾಡಿ ಪರೀಕ್ಷೆ—ಕೃತಕ ಪರ್ಮಿಟ್ಟು—ಕಪ್ಪು ಭಾಷೆ—ಶಾಖಾಯ ಲವಣಾಯದ ಮರ್ಮ ಛಾಯಾ (ಕಾಡಿಗೆ) ವ್ಯಾಪಾರದ ಧರ್ಮ ಮುಂತಾದ ಸಾವಿರ ಕುಶಲ ಕಲೆಗಳಲ್ಲಿ ತರಪೇತು ಮಾಡಿದರು. ಕೊಂಚ ದಿನಗಳಲ್ಲೇ ನಾನೇ ಸ್ವತಃ ವ್ಯಾಪಾರ ಪ್ರಾರಂಭಿಸಿದೆ....ದೇವರ ದಯೆ ದೇವರಾಯನ ದುರ್ಗದ ಬಳಿ ಕೆರೆಕೆಳಗಿನ ಎರಡು ತೋಟ—ಮೈಸೂರಲ್ಲೇ ನಾಲ್ಕು ಮನೆ—ಆಕೆ ಮೈಮೇಲೆ ಪಂಚೇರು ಬಂಗಾರ ಹಾಕಿದ್ದೀನಿ....”

“....ಒಂದೂ ಅರ್ಥವಾಗೋದೇ ಇಲ್ಲವೇ....ನಂಗೆ”

“ಬಿಡಿಸಿ ಹೇಳೋ ವಿಷಯವಲ್ಲ ರಾಯರೆ. ನಮ್ಮ ರಂಗಭೂಮಿ ರೇಷ್ಮೆಯಿಂದ ರವೆವರೆಗೂ—ಬಟ್ಟೆಯಿಂದ ಕಬ್ಬಿಣದವರೆಗೂ ಹಬ್ಬಿದೆ—ಅರ್ಥವೆ? ನೀವೂ ತಿಳಿದೋರು. ನಮ್ಮ ಕಾರ್ಯಕೇಂದ್ರ ಗಡಿಯೂರುಗಳು ಹರಿಹರ—ಮೊಳಕಾಲ್ಮುರು—ಸೊರಬ ಸಾಗರ ಇಲ್ಲೆಲ್ಲಾ ನಮ್ಮ ಸಂಗಾತಿಗಳಿದ್ದಾರೆ. ಮತ್ತೆ ಮತ್ತೆ ತಮ್ಮ ಮಾತು—ದೇವರು ಮಾರ್ಗ ತೋರಿಸುತ್ತಾನೆ ಅನ್ನೋ ಮಾತು ನೆನಪಿಗೆ ಬರುತ್ತೆ....ಇಷ್ಟಕ್ಕೆಲ್ಲಾ ಕಾರಣರಾದ ತಮ್ಮ ದರ್ಶನ ಪಡೆದು ಹೋಗೋಣಾಂತ ಬಂದೆ.”

“ನಾನ್ಯಾವ ದೊಡ್ಡ ಮನುಷ್ಯ... ಎಲ್ಲಕ್ಕೂ ಕಾಲ ಒದಗಿ ಬಂದು ಒದೀಬೇಕು ಅದೃಷ್ಟ....”

‘ಲೇ’ ಎಂದು ಶ್ರೀಮತಿ ಭೀಮರನ್ನು ಕೂಗಲು ಅವರು ವಸ್ತ್ರ ಮುಚ್ಚಿದ ತಟ್ಟೆ ತಂದು ಕೊಟ್ಟರು.

“ಇಕ್ಕೊ ಈ ಅಲ್ಪಕಾಣಿಕೆ” ಎಂದು ಆ ತಟ್ಟೆ ನನ್ನ ಮುಂದೆ ಹಿಡಿದರು. “ಬೇಡ ಬೇಡ” ಎನ್ನುತ್ತಲೇ ಕೈಗೆ ತೆಗೆದುಕೊಂಡೆ. “ವಿಶ್ವಾಸವಿರಲಿ.... ನಮಸ್ಕಾರ” ಎಂದು ಠೀವಿಯಿಂದ ಹೊರಬಿದ್ದರು. ಗಂಡಹೆಂಡಿರಿಬ್ಬರೂ ಕೂತ ಮೇಲೆ ಕಾರು ಸದ್ದು ಮಾಡದೆ ಹರಿದುಹೋಯಿತು.

ಮುಚ್ಚಿದ ವಸ್ತ್ರ ತೆಗೆದು ನೋಡಿದೆ.—“ಲೇ” ಎಂದೆ, ಅವಳೂ ಬಂದು ತಟ್ಟೆ ನೋಡಿ ಚಪಕ್ಕಾದಳು. ಒಂದು ದೊಡ್ಡ ಬಂಗಾರದ ಥೂಕುದಾನಿ ತುಂಬ ಸವರನ್ ತುಂಬಿತ್ತು—ಮೈಸೂರು ಚಿಗುರೆಲೆ ಕಟ್ಟು, ಚನ್ನಪಟ್ಣದ ಸುಣ್ಣ, ತರಿಕರೆ ಅಡಿಕೆ, ಇನ್ನೊಂದು ಭರಣಿಯಲ್ಲಿ ಮೂರೆಳೆ ಚಿನ್ನದಸರ. “ಟಿಸ್ ಮದ್ದಿನ ಸಾಗಿದ್ದ ಆಸಾಮಿ, ಹೈಡ್ರೋಜಿನ್ ಬಾಂಬ್ ಆಗಿಹೋದ” ಎಂದೆ. “ಹೌದು” ಎಂದು ಅವಳು ಸರಹಾಕಿಕೊಂಡಳು. ನಾನು ಥೂಕುದಾನಿ ತೆಗೆದುಕೊಂಡು ಹುಬ್ಬು ಹಾರಿಸಿದೆ.

---

# ಜನಸಾದ ಸಾಹಿತ್ಯ

ಸಾಹಿತ್ಯವು ಜನ ಜೀವನವನ್ನು ಪ್ರತಿಬಿಂಬಿಸುವುದೇ? ಅಥವಾ ವನ ಜೀವನವನ್ನು ಪ್ರತಿಬಿಂಬಿಸುವುದೇ? ಎಂಬುದೇ ಇಂದಿನ ಅವೋಘವಾದ ಸಮಸ್ಯೆ ವಿಮರ್ಶನಕಾರರಲ್ಲಿ. (ಹಾಗೆಂದು ವಿಮರ್ಶಕ ದಿಗ್ಗಜನೊಬ್ಬ ಹೇಳಿದ. ನನಗೇನೂ ತಿಳಿದಿತ್ತಿಲ್ಲ ಅಣ್ಣ.)

ಸಾಮಾನ್ಯ ಜನರ ಸಾಮೂಹಿಕ ಕೂಗನ್ನು ಕೇಳಿದರೆ ಈ ಸಮಸ್ಯೆಯ ಪರಿಹಾರ ಸುಲಭ ಎಂದೆನ್ನಿಸುತ್ತದೆ.

ಹಿಂದೂ ಓಂಕಾ ಹಿಂದೂಸ್ಥಾನ್
ಕಭೀ ನ ಹೋಗಾ ಪಾಕಿಸ್ಥಾನ್

ಎಂದು ಒಂಧು ಪಂಗಡದ ಸಾಹಿತ್ಯದ ಕೂಗು ಕೇಳಿತಂತೆ.

ಹಸ್‌ಕೇ ಹಸಕೇ ಪಾಕಿಸ್ಥಾನ್
ಲಡಾಯಿ ಕರ್ಕೇ ಹಿಂದೂಸ್ಥಾನ್

ಎಂದು ಕರಾಚಿ ಗೋಡೆಗಳ ಮೇಲೆ ಭಾರತ ಈ ಮುಂಚೆ ಕೊಟ್ಟ ಇದ್ದಲಿನಲ್ಲಿ ಬರೆದಿದ್ದಾರಂತೆ, ಅಲ್ಲಿನ ಜನಪಾದ ಸಾಹಿತಿಗಳು.

* * *

ತಡುಕ್ಕರವನ್ ಕಯಿತ್ ಮೇಲೆಯುಂ
ಪೂಣಲ್ ಇರ್ಕರವನ್ ಮೇಲೆಯುಂ
ಕೈ ಪೋಡು! ತಂಬೀ! ಕಾಲು ಪೋಡು!

ಎಂದು ತಮಿಳ ಕಜಗಂ ಒಂದು ಸಾಹಿತ್ಯದ ಚೂರು ನುರುಕಿತಂತೆ ತಮಿಳು, ದ್ರಾವಿಡ ರಾಷ್ಟ್ರ ನಿರ್ಮಾಣ ಮಾಡಬಯಸುವವರು.

ಚೆನ್ನ ಪಟ್ಟಣಂ ಮಾದೇರಾ!
ಎವ್ವರು ರಾಸಿ! ಎವ್ವರು ಪೋನಿ!
ಮೇಮು! ರೆಡ್ಡಿವಾಂಡ್ಲು ಮೇಮು!
ದಾನ್ನಿ ವಿಡಿಚಿ ಪೋನು ರಾ!

ಎಂದು ತೆಲುಗಿನವರು ಚೀಟಿ ಅಂಟಿಸಿದರಂತೆ ಮದರಾಸಿನಲ್ಲಿ—ಮಾದಿರಾ ಮದರಾಸು ! ಎನಿ ಬೊಂಬಡಿ ಪೆಟ್ಟಿ.

* * *

ಏನೇ ಬರಲಿ,
ಒಗ್ಗಟ್ಟಿರಲಿ !
ಕನ್ನಡ ಮಾತೆಯ ಮಕ್ಕಳು ಎಲ್ಲಾ
ಒಂದೇ ಮನೆಯಲಿ ಬಾಳಲಿ ಬದುಕಲಿ ! !

ಎಂದು ಉತ್ತರ ಕರ್ನಾಟಕದವರೆಲ್ಲಾ ಉಷಃಪ್ರಾರ್ಥನೆಗೆ ಒಂದು ಚುಟುಕ ಹಾಡಿದರಂತೆ.

ಕನ್ನಡಮ್ಮನ ಹಣತೆ ಹತ್ತಲಿ.
ಕನ್ನಡಮ್ಮನ ಮನೆಯು ಬೆಳೆಯಲಿ.
ಆದರೆ
ಇನ್ನೂ ಎಣ್ಣೆ ಇಲ್ಲ
ಸಣ್ಣ ಬತ್ತೀನೂ ಇಲ್ಲ
ಮುಂದೆ ಒಂದಾಗೇ ಆಗಲಿ

ಎಂದು ಮಹೀಶೂರರು ಮಾರ್ದನಿ ಕೊಟ್ಟರಂತೆ, ಸಂಧ್ಯಾಕಾಲದಲ್ಲಿ.

* * *

ಮರುಮಕ್ಕತ್ತಾಯಂ
ಅದ್ನಲ್ಲ ಮಾರ್ಗಂ
ಅಚ್ಚನೆ ಎಂದಿನಾ ಕೇಳ್ಕುನ್ನದ್
ಅಮ್ಮೆಯೇ ಎಲ್ಲಾಂ ಕೊಡುಕ್ಕುನ್ನದ್
ಅಮ್ಮೇ ! ಅಮ್ಮೇ ! ರಕ್ಷಿಕ್ಕಣೇ !

ಎಂದು ಸೋದರಳಿಯಂದಿರು ಮಲೆಯಾಳದಲ್ಲಿ ಕೂಗಿಟ್ಟರಂತೆ.

ತಿನ್ನಾನಿಲ್ಲ ಚೋರು
ಅಚ್ಚಂಡೆ ವೀಟ್ಟಿಲ್
ತಲೆಚ್ಚೋರು ಮಾತ್ರಂ ಕೊಡುತ್ತು ಅಚ್ಚನ್
ದೆಲ್ಲಿಕ್ಕಿ ನಾನ್ ಪೋವುನ್ನು
ಅವಡೆ ವಲಿಯ ಮೇನನ್ ಆವುನ್ನು

ಎಂದು ಅಪ್ಪನ ಮಕ್ಕಳೆಲ್ಲ ಕೂಗುತ್ತ ದೆಹಲಿಗೆ ಹೊರಡುವರಂತೆ.

---




ದುಃಸ್ವಪ್ನಗಳು ಬೀಳ
ದಂತೆ ಆತ ಆಗಿನ ಕಾಲ
ದಲ್ಲಿ "ರಾಮಸ್ಕಂದಂ
ಹನುಮಂತಂ, ವೈನ
ತೇಯಂ ವೃಕೋದರಂ"
ಇತ್ಯಾದಿ ಜಪಿಸುತ್ತಿದ್ದ
ನಂತೆ.




ಈಗ ಈತ
ದುಃಸ್ವಪ್ನಗಳು ಬೀಳವಂತೆ
ಮೈಸೂರು ಸರ್ಕಾರಿ
ವಿಮಾ ಶಾಖೆಯಲ್ಲಿ ವಿಮೆ
ಮಾಡಿ ನಗುನಗುತ ಇರು
ತ್ತಾನೆ.

---

## ಮೈಸೂರು ಸರ್ಕಾರದ ವಿಮಾ ಇಲಾಖೆ,
## ಬೆಂಗಳೂರು.

# ರಷ್ಯನ್ ಕವನವೊಂದು

– ೧ –

ಬೇಲಿ,
ಗೋಲಿ,
ಮುತ್ತಿದೆ
ಸುತ್ತಲು;
ಭಂಡರ ಹೂಳಿ,
ಬಡವರ ಹೋಳಿ—
ಕಾಳಿಯು ಕೇಳಿ
ತರುವರೆ ಉಣಿಸ?

– ೨ –

ಕೂಲಿ,
ನಾಲಿ,
ಎತ್ತಿದೆ
ಸುತ್ತಿಗೆ;
ಭಂಡರ ಧೂಳಿ,
ಸುಂಟರ ಗಾಳಿ—
ಕೋಳಿಯು ಕೇಳಿ
ಅರಿವರೆ ಮೆಣಸ?

– ೩ –

ಖಾಲಿ,
ಜೇಲ,
ಪಿತ್ತವ
ಹೊತ್ತಿದೆ;
ಹೆಂಡದ ಚಾಳಿ
ಹಿಂಡದ ಗೂಳಿ–
ಊಳಿಗ ಹೇಳಿ
ಮರೆವರೆ ಕಣಸ?

(ಕನ್ನಡಿಸಿದವರು : ಗೆಳೆಯ ವಿಷಕಂಠಿಸ್ಕಿ)

# ಪರವಾ ಇಲ್ಲ

---

ಮೊನ್ನೆ, ನಾನು ಒಂದು ಸಂಗೀತ ಕಛೇರಿಗೆ ಹೋಗಿದ್ದೆ. ಅದು ಮುಗಿಯುವ ತನಕ ಕುಳಿತಿದ್ದೆ. ಮುಗಿದ ಕೂಡಲೇ ಎದ್ದು ಬಂದೆ. ಆಕೆ ಹಾಡುತ್ತಿದ್ದಾಗ, ನಾನೂ ತಲೆ ಅಲ್ಲಾಡಿಸಿದೆ; ತೊಡೆ ತಟ್ಟಿದೆ; ಶಹಭಾಸ್, ಅಯ್ಯೋ, ಆಹ ಎಂದೆಲ್ಲ ಇತರರಂತೆ ನಾನೂ ಅಂದೆ; ಟಿಕೀಟಿಗಾಗಿ ಎರಡೂವರೆ ರೂಪಾಯಿ ನಾನೂ ಖರ್ಚುಮಾಡಿದೆ. ಆದರೂ, ಅಲ್ಲಿಗೆ ಬಂದಿದ್ದ ಅನೇಕರ ಹಾಗೆ ನನಗೂ ಸಂಗೀತ ಸುತರಾಂ ಬರದು. ಎದೆ ಸೀಳಿದರೆ 'ಸರಿಗಮ ಪಧನಿಸ ಏಕೆ, ಎರಡು ಸ್ವರ ಇಲ್ಲ. ನನ್ನಲ್ಲೂ ಅಷ್ಟೆ; ಅಲ್ಲಿಗೆ ಬಂದಿದ್ದ ನೂರಾರು ಮಹನೀಯರಿಗೂ, ಮಹಿಳೆಯರಿಗೂ ಇಲ್ಲ.

ಹಾಗಾದರೆ, ಏಕೆ ಈ ವಿಚಿತ್ರ ನಡವಳಿಕೆ ಅಂತೀರೋ? ಅದಕ್ಕೆ ಅನೇಕ ಕಾರಣಗಳಿವೆ. ಹಾಡುತ್ತಿದ್ದದ್ದು ಒಬ್ಬ ಆಕೆ; ಆದ್ದರಿಂದ ಊರಿನ ವಿಟರೆಲ್ಲರೂ ಎರಡೂವರೆ ತೆರಲು ಸಿದ್ಧರಾಗಿದ್ದರು. ಆಕೆಯ ರೂಪಲಾವಣ್ಯಗಳಿಗನುರೂಪವಾದ ಸಂಗೀತ ಸಾಮರ್ಥ್ಯವೂ ಆಕೆಗಿರಬೇಕೆಂದು ಹಲವರು ಮೋಸಹೋದರು — ನವಿಲಿನ ಉದಾಹರಣೆಯಿಂದ ಯಾವ ಪಾಠವನ್ನೂ ಕಲಿಯದ ಮಂಕರು. ಅಲ್ಲದೆ, ಆಕೆಯ ಪರವಾಗಿ ಪ್ರಚಾರ ಬೇರೆ, ಜನರನ್ನು ಮರುಳುಮಾಡಿ ಅವರ ಕಣ್ಣಲ್ಲಿ ಮರಳೆರಚಿ, ಕೆರಳಿಸುವುದಕ್ಕೆ ಪ್ರೇರಕವಾಗಿ....ಸಂಗೀತಕಾರರು ಒಂದು ವೇಳೆ ಬರದೆ ಇದ್ದರೂ, ಸಂಗೀತ ಸಭೆಗೆ ಇಂಥಿಂಥವರು ಬರುತ್ತಾರೆ. ಅವರು ಸಾಮಾನ್ಯವಾಗಿ ಇಂಥಿಂಥ ಕಡೆ ಕುಳಿತು ಆಕಳಿಸುತ್ತಾರೆ, ಎಂಬುದನ್ನು ಪತ್ತೆ ಹಚ್ಚಿ, ಅವರನ್ನು ಮೂರು ಗಂಟೆ ಕಾಲ ಮೂಲೆಯಿಂದ ನೋಡಬಹುದಲ್ಲಾ ಎಂಬ ಆಸೆಯಿಂದ ಕೆಲವರು ಅಲ್ಲಿಗೆ ನುಗ್ಗಿದ್ದರು.

ಇನ್ನು ಕೆಲವರು, ಬೇರೊಬ್ಬಾಕೆಯ ಭಕ್ತರು. ಈಕೆಗೇನೂ ಬರುವುದಿಲ್ಲ ತಾಳ ತಪ್ಪು, ಮೇಳ ಕೂಡುವುದಿಲ್ಲ, ಗಂಟಲು ಕರ್ಕಶ, ನಾದ ಮಂದ, 'ಶಾರೀರ ತ್ರಿಶೂಲ, ಆಲಾಪನೆ ಪ್ರಲಾಪ, ಎಂದೆಲ್ಲ ಅವರು ಈಕೆಯ ಭಕ್ತರನ್ನು ಮೂದಲಿಸಿ ಅವರೊಂದಿಗೆ ಬಾಜಿ ಕಟ್ಟಿ, ಅದನ್ನು ಪಡೆಯುವ ಸಲುವಾಗಿ, ಅಲ್ಲಿಗೆ ಬಂದಿದ್ದರು. ಅವರು ಸಂಗೀತ ಪ್ರಾರಂಭವಾದಾಗಲೇ ಗಹಗಹಿಸಲು ಮೊದಲು ಮಾಡಿದರು; ಇದ್ದಕ್ಕಿದ್ದ ಹಾಗೆ, ಅಯ್ಯೋ; ಹಾಡು ಮುಗಿಯುವ ಮೊದಲೇ ಚಪ್ಪಾಳೆ ಹೊಡೆದರು; ಪವಮಾನ ಹಾಡಿ ಎಂದು ಚೀಟಿ ಕಳುಹಿಸಿದವರು

ಈಕೆಯ ಭಕ್ತಮಂಡಲಿಯನ್ನು ರೇಗಿಸಿದರು. ಕಡೆಗೆ ಎಲ್ಲರೂ ಒಟ್ಟಾಗಿ ಎದ್ದು ದಡದಡನೆ ಅರ್ಧದಲ್ಲೇ ವಾಕ್‌ಔಟ್ ಮಾಡಿದರು.

ಸಂಗೀತ ಸಭೆಗೆ ಮೆಂಬರಾಗಿ ಚಂದಾ ಕೊಟ್ಟಿರತಕ್ಕ ಕಾರ್ಯದರ್ಶಿಯ ಗೆಳೆಯರು, ಅದರ ಅಧ್ಯಕ್ಷರ ಅಡಿಯಾಳುಗಳು, ಅದರ ಉಪಾಧ್ಯಕ್ಷರ ಗುಮಾಸ್ತೆಯರು, ಹಣ ತೆತ್ತ ಸಂಕಟಕ್ಕೆ ಅದರ ಪರಿಹಾರಕ್ಕಾಗಿ, ಎಲ್ಲ ಕಚೇರಿಗಳಿಗೂ ಬಂದೇಬರುತ್ತಾರೆ. ಕಾಂಪ್ಲಿಮೆಂಟರಿ ಟಿಕೇಟ್ ಪಡೆದ ಅದರ ಕಾರ್ಯದರ್ಶಿಯ ಕುಟುಂಬದವರೂ ಅದರ ಅಧ್ಯಕ್ಷರ ಮೇಲಧಿಕಾರಿಗಳೂ, ಅದರ ಉಪಾಧ್ಯಕ್ಷರ ಸಾಲಗಾರರೂ, ಅವರವರ ಪಕ್ಕದ ಮನೆಯವರಿಗೂ, ಬೀಗರಿಗೂ ಅವನ್ನು ವರ್ಗಾಯಿಸಿದ್ದರಿಂದ, ಆ ದಾಕ್ಷಿಣ್ಯಕ್ಕೋಳಗಾಗಿ ಅವರು ಕಚೇರಿಗೆ ಬರಲೇ ಬೇಕಾಯಿತು. ಬಂದ ಮೇಲೆ, ಅವರಿವರ ತಾಳಕ್ಕೆ ಸರಿಯಾಗಿ ತಾವೂ ತಾಳ ತಟ್ಟಿಕೊಂಡು, ಅವರಿವರ ಮಕ್ಕಳ ರೋದನ ಕಿವಿಯನ್ನು ಕಿವುಡು ಮಾಡಿದಾಗ, ಎದ್ದು ಹೋಗಲೇಬೇಕಾಯಿತು.

ಸತಿಪತಿಯರ ಪೈಕಿ, ಸತಿಗೆ ಸಂಗೀತಾಭಿರುಚಿಯಿದ್ದರೆ, ಅವಳನ್ನು ಹಿಂಬಾಲಿಸಿ ಪತಿಯೂ ಕಚೇರಿಗೆ ಬರಲೇಬೇಕಾಗುತ್ತದೆ, ಇನ್ನೂ ಮಕ್ಕಳಿಲ್ಲದಿದ್ದರೆ. ಪತಿಗೆ ಸಂಗೀತದ ಹುಚ್ಚಿದ್ದು, ಆತ ಸಭೆಗೆ ಮೆಂಬರಾಗಿ, ಸ್ತ್ರೀ ಗಾಯಕಿಯರ ಕಚೇರಿ ದಿನ ಹೊರಡಲು ಉದ್ಯುಕ್ತನಾದರೆ, ಅವನನ್ನು ಒಬ್ಬಂಟಿಗನಾಗಿ ಕಳುಹಿಸುವುದು ಸಹಧರ್ಮಕ್ಕೆ ಹಾನಿಯಾದ್ದರಿಂದ, ಸತಿ ಕೂಡ ಪತಿಯನ್ನು ಹಿಂಬಾಲಿಸಲೇ ಬೇಕು. ಇದೂ ಸಭೆ ತುಂಬುವುದಕ್ಕೆ ಒಂದು ಕಾರಣ.

ಇನ್ನು ಜಮಖಾನೆಯವರು, ಧ್ವನಿವರ್ಧಕ ಯಂತ್ರವನ್ನು ಕಡಮೆ ದರದಲ್ಲಿ ಒದಗಿಸಿದ ಕಂಪನಿ ಮಾಲೀಕರ ನಂಟರಿಷ್ಟರು, ಅಚ್ಚುಕೂಟದ ಹಳೇ ಬಾಕಿಗಾಗಿ ದಿನಕ್ಕೆರಡಾವರ್ತಿ ಕಾರ್ಯದರ್ಶಿಯನ್ನು ಪೀಡಿಸುವ ಬಿಲ್‌ಕಲೆಕ್ಟರುಗಳು, ಸಂಗೀತದಾಕೆಯನ್ನು ಹೋಟಲಿಂದ ಕರೆದು ತಂದ ಜಟಕಾದವನು, ಮೃದಂಗಕ್ಕೆ ಹಿಟ್ಟನ್ನು ತಂದುಕೊಟ್ಟವನು, ಇತ್ಯಾದಿಯವರೂ ಸಭಾಮಂದಿರದಲ್ಲಿರುತ್ತಾರೆ.

ನೀವು ಏಕೆ ಹೋದಿರಿ ಅಲ್ಲಿಗೆ ಅಂತ ವಾಚಕ ಮಹಾಶಯರುಗಳು ನನ್ನನ್ನೆ ಕೇಳಬಹುದಲ್ಲವೆ ? ಅದನ್ನೂ ಹೇಳಿಬಿಡ್ತೇನೆ. ನನಗೆ ಮದುವೆಗಾಗಿ ನಮ್ಮಪ್ಪ ಒಂದು ಹೆಣ್ಣು ಗೊತ್ತುಮಾಡಿದ್ದ. ಮೊನ್ನೆ ಬೆಳಿಗ್ಗೆ ಈಕೆಯ ಫೋಟೋವನ್ನು ಗೋಡೆಯೊಂದರ ಮೇಲೆ ನೋಡಿದಾಗ, ನನ್ನ ಗೆಳೆಯ ತಮ್ಮಯ್ಯ (ಅವನು ಆ ಹೆಣ್ಣನ್ನು ಎಲ್ಲೋ ಆಗಲೇ ಕಂಡಿದ್ದನಂತೆ), "ಲೋ, ಗಂಗೂ! ಆ ಹುಡುಗಿಯ ಹಲ್ಲಿನ ಉಬ್ಬು, ಈಕೆಯದಷ್ಟೇ ಇದೆ ಕಣೋ, ಕೊಂಚವೂ ಕಡಮೆ ಇಲ್ಲ,

ನಾನು ಗ್ಯಾರಂಟಿ ಕೊಡಬಲ್ಲೆ ಎಂದು ಹೇಳಿದ್ದ. ನಾಳೆಯೋ. ನಾಡಿದ್ದೋ ಹೆಣ್ಣು ನೋಡುವ ಸಮಾರಂಭಕ್ಕೆ ನಮ್ಮನ್ನೆಲ್ಲ ಆತ ಕರೆದುಕೊಂಡು ಹೋಗ್ತಾನಂತೆ. ಸುಮ್ಮನೆ ಇಲ್ಲಿಂದ ಅಲ್ಲಿಗೆ ಹೋಗಿ, ಅವರ ಮನೆಯಲ್ಲಿ ಮೈಸೂರು ಪಾಕ್, ಬೋಂಡ, ದ್ರಾಕ್ಷಿ ತಿಂದು, ಕಾಫಿ ಕುಡಿದು, ಒಲ್ಲೆ ಅಂತ ಹೇಳೋದಕ್ಕೆ ಬದಲು, ಈ ಸಂಗೀತದ ಆಸಾಮಿಯನ್ನೇ ನೋಡಿ, ಇತ್ಯರ್ಥಕ್ಕೆ ಬಂದು ಬಿಡೋಣ ಎಂದು, ನಾನು ಎರಡೂವರೆ ತೆತ್ತು ಮೂರು ಗಂಟೆ ಕಾಲ ಮೀನ ಮೇಷ ಎಣಿಸಿದೆ....ಪರವಾ ಇಲ್ಲ! ಮೈಸೂರು ಪಾಕ್ ತಿಂದೇ ಬಿಡೋಣ ನಾಳೆಯೋ ನಾಳದ್ದೋ, ಅಂತ ಅನ್ನಿಸಿತು.

—ಪ್ರಸಾದ್





ಮಾಣಿಯ ಕೈಚಳಕ.

# ಮದುಮಗನ ಮೌಲ್ಯ

★ ಟಿ. ಸುನಂದಮ್ಮ ★

....................

........ಹರಹರಿಯ ನರಸಿಂಹರಾಯರ ಮಗ ನರಹರಿಯನ್ನು ನಮ್ಮ ನಳಿನೀಗೆ ಮಾಡಿಕೊಳ್ಳಿ ಎಂದು ನಾಲ್ಕು ದಿನದ ಕೆಳಗೆ ನನಗೆ ಕಾಗದ ಬಂತು. ಹೇಗಿದ್ದರೂ ಹತ್ತಿರ ಹೋಗಿದ್ದೀರಿ. ಹಾಗೇ ಹರಹರಿಗೆ ಹೋಗಿ ಹುಡುಗನ್ನ ಸರಿಯಾಗಿ ನೋಡಿ, ನಮ್ಮ ನಳಿನೀಗೆ ತಕ್ಕ ವರನೇ ಬರೆಯಿರಿ. ನೋಡೋಣ ನಿಮ್ಮ ನಾಜೂಕನ್ನ........

ಇತಿ,

ಗೃಹಲಕ್ಷ್ಮಿ.

....................

........ಯಥಾಪತ್ರ, ನರಸಿಂಹರಾಯರ ಮನೆಗೆ ಹೋಗಿ ನರಹರೀ ನಾಮಧೇಯನನ್ನು ನೋಡಿ ಬಂದೆ. ಹುಡುಗ ಸಾಧು. ನನ್ನ ಹಾಗೇ ನಾರೀ ನೆರಳಾಗಬಲ್ಲ! ಭುಜ ಸವರಿ, ಬೆನ್ನು ತಟ್ಟಿ, ಬೆತ್ತದ ಕುರ್ಚಿಯ ಮೇಲೆ ಕೂರಿಸಿ ಬೋರನ್ ವೀಟ ಕೊಟ್ಟ. ಬಾಗಿಲ ಬದಿಯಿಂದ ಬಗ್ಗಿಬಗ್ಗಿ ನೋಡಿ, ಬಾಯ್ಕಿರಿಯುತ್ತಿದ್ದ (ಯಾಕೋ ಕಾಣೆ) ಬಾಲಕರನ್ನು ಬೆದರಿಸಿ ಓಡಿಸಿದ (ಮುಂದೆ ಚಂದಾ ಎತ್ತುವವರನ್ನೂ, ಚಾಣಾಕ್ಯರಾದ ವಿಮಾ ಏಜೆಂಟರನ್ನೂ ಚಾಲೂಕಿನಿಂದ ಚೆದುರಿಸಬಲ್ಲನೆನ್ನುವುದಕ್ಕೆ ಶುಭ ಸೂಚನೆ). ಅಲ್ಲದೆ, ಅವರ ಮನೆಯ ಮಕ್ಕಳು ಒಬ್ಬರೂ ನನ್ನ ಚಪ್ಪಲಿಯನ್ನು ಕಾಲಿಗೆ ಮೆಟ್ಟಿ ಮೆರೆದು, ಹೊರಡುವ ಹೊತ್ತಿಗೆ ಒಂದನ್ನ ಮಂಗಮಾಯ ಮಾಡುವ ಗೋಜಿಗೇ ಹೋಗಲಿಲ್ಲ!.... ಅಂತೂ ನರಹರಿ, ನಳಿನಿಗೆ ಒಪ್ಪುವ ವರನೆಂದು ನನಗೆ ತೋರುತ್ತೆ........

ಇತಿ,

ಗೃಹ ನಾರಾಯಣ.

....................

........ಮಂಗಳಾರತಿ, ನಿಮ್ಮ ಮೊದ್ದು ಬುದ್ಧೀಗೆ! ಹೀಗೇನೇ ಹುಡುಗನ್ನ ಪರೀಕ್ಷಿಸೋದು! ನಿಮ್ಮ ಬೊಚ್ಚು ಬಾಯಿಗೆ ಬೋರನ್ ವೀಟಾ ಬಿತ್ತೂಂತ

ಬಾಯ್ಬಾಯಿ ಬಿಡುವುವೇ? ನಿಮ್ಮ ಆನೆ ಪಾದದಳತೆಗೆ ನಾನು ಹೊಲಿಸಿಕೊಟ್ಟಿರುವ ಚಪ್ಪಲಿಯನ್ನು ಯಾವ ಚಪರಾಸಿ ಸಹ ಮೆಟ್ಟುವ ಗೋಜಿಗೆ ಹೋಗಲಾರ! ನಿಮ್ಮ ಕುದುರೇ ಮುಖವನ್ನು ಕಂಡು ಕೆರಳಿ ನಕ್ಕ ಕುಕ್ಕೆಗಳನ್ನು ಕಳಿಸಿಬಟ್ಟೆನೆಂದು ಹಿರಿಹಿಗ್ಗಿದಿರಾ? ಈಗ ನಮ್ಮ ಮನೆಯಲ್ಲಿ, ನಿಮ್ಮ ಗೈರುಹಾಜರಿಯಲ್ಲಿ, ಚಂದಾ ವಸೂಲ್ದಾರರನ್ನೂ, ಕವಳ ಕೇಳುವವರರ್ನೂ ಜಿಮ್ಮಿಯೇ ಓಡಿಸುತ್ತಿಲ್ಲವೇ? ನೀವಾದರೇನು, ಜಿಮ್ಮಿಯಾದರೇನು ಎರಡೂ ಒಂದೇ.

ನಾನು ಪಾರ್ಸಲ್ ಮೂಲಕ ಕಳಿಸಿರುವ ಪದಾರ್ಥಗಳನ್ನು ಸರಿಯಾಗಿ ಪ್ರಯೋಗಿಸಿ, ಫಲಿತಾಂಶವನ್ನು ಬರೆಯಿರಿ. ಮೂರು ದಿನಗಳೊಳಗಾಗಿ ಮಾರುತ್ತರ ಬರದಿದ್ದರೆ ಮರುಪ್ರಯಾಣದ ಛಾರ್ಜು ವಜಾ........!

ಇತಿ,

ಮನೆಯೊಡತಿ.

.....................

........ನೀನು ಕಳಿಸಿದ ಮೂರ್ಗಾಲಿ ಮತ್ತು ಚೀಲಗಳು ತಲುಪಿದುವು. ಆದರೆ....ಅವು....ಯಾಕೆ? ಮೂರ್ಗಾಲಿ, ಮುಂದಾಗುವ ಮದುಮಗನ ಮನೇ ಮಗುವಿಗೇ? ಅಥವಾ....ಮುಂಬರುವ ನಳಿನಿಯ ನಳಿಗೂಸಿಗೆ ಈಗಲೇ ಆಡ್ವಾನ್ಸಾಗಿ ಬಿಟ್ಟುಬರಲೆಂದೇ?....ಈ ಸೈಜುವಾರಿ ಆರು ಚೀಲಗಳಲ್ಲಿ ಏನು ತರಬೇಕು? ಸ್ನೋ ಬಾಟ್ಲುಗಳೇ, ಸಾಬೂನು ಬಿಲ್ಲೆಗಳೇ, ಸೆಂಟು ಸೆಟ್ಟೇ ಅಥವಾ ಸೀರೆ ಸಿಲ್ಕುಗಳೇ? ಇಲ್ಲಾ....ನನಗೇನಾದರೂ.....ಮಗಳ ಮದುವೆಗಾಗಿ..... ಸೂಟಿಂಗ್....?

ಇತಿ,

ಮನೆಯೊಡೆಯ (?)

.....................

........ಅದಕ್ಕೇ ನಾನು ಹೇಳುವುದು, ಸೋರೆ ಬುರುಡೆ, ಸಹರಾ ಮರುಳ್ಗಾಡು ನಿಮ್ಮ ಮೆದುಳೂಂತ. ವರ ಪರೀಕ್ಷೆಗಾಗಿ ಸಲಕರಣೆಗಳನ್ನು ಕಳಿಸಿದರೆ, ಮಗುವಿನ ಉಡುಗೊರೆಯಂತೆ, ಮನೆಯಾತನಿಗೆ ಸೂಟಂತೆ!

ಮೂರ್ಗಾಲಿ ಕಳಿಸಿರುವುದು, ಮದುಮಗ ಮುಂದೆ ಮಗುವನ್ನು ಕೂಡಿಸಿಕೊಂಡು ತಳ್ಳಬಲ್ಲನೇ ಎಂದು. ಅದನ್ನು ಕೊಟ್ಟು, ಅವನು ಯಾವ ವೇಗದಲ್ಲಿ ಮತ್ತು ಯಾವ ಭಂಗಿಯೊಡನೆ ತಳ್ಳಬಲ್ಲ ಪರೀಕ್ಷಿಸಿ. ನಳಿನಿ, ಸಾಮಾನು ಸರಂಜಾಮು ಕೊಂಡು, ತುಂಬಿದಾಗ ವೇಗವಾಗಿ ತಳ್ಳಬಲ್ಲನೇ; ಅವಳೊಂದಿಗೆ ಗಾಳಿ ಸಂಚಾರ ಹೊರಟಾಗ, ಮಗುವನ್ನು ಕೂರಿಸಿಕೊಂಡು ಮೇಲ್ನೋಕಿ ಅವಳ ನಡೆ ಜೋಡಿಯಾದಾನೇ, ಶೋಧನೆ ಮಾಡಿ. ಆ ಮೇಲೆ ನಳಿನಿ ನಲ್ಲುವರ

ನನ್ನು ಕಂಕುಳಲ್ಲಿ ಎತ್ತಿ ತಿರುಗಬೇಕಾದೀತು. (ಪ್ರಭಾತ್ ನಗರದ ಪ್ರದರ್ಶನದಲ್ಲಿ ನೀವು ಪ್ರೇಮಾನ್ನ ನನ್ನ ಕೈಲಿ ಹೊರಿಸಿ ನನ್ನ ಪ್ರಿಂಟೆಡ್ ಜಾರ್ಜೆಟ್ಟಿಲ್ಲಾ ಸುಕ್ಕಿಸಿದ್ದು ಮರೆತಿಲ್ಲ!) ಸಧ್ಯ ನಳಿನಿಗೂ ನಿಮ್ಮಂಥಾ ನಾಲಾಯಕ್ ನಾಥನೇ ನೇತುಬಿದ್ದಾನು!

ಆ ಆರು ಚೀಲಗಳಲ್ಲೂ ಅಕ್ಕಿ, ಗೋಧಿ, ಸಕ್ಕರೆ, ಹಿಟ್ಟು ಮುಂತಾದುವುಗಳನ್ನು ಭರ್ತಿಸಿ, ಸೈಕಲ್ಲಿಗೆ ತಗುಲಿ ಹಾಕಿಸಿ. (ಅವನೇ ಹಾಕಿಕೊಳ್ಳಲಿ, ಸರಿಯಾಗಿ ಬ್ಯಾಲೆನ್ಸ್ ಮಾಡುತ್ತಾನೋ ಇಲ್ಲವೋ ನೋಡಿದ ಹಾಗಾಗುತ್ತೆ!) ನಂತರ ಒಂದೂವರೆ ಫರ್ಲ್ಲಾಂಗ್ ಓಡಾಡಿಸಿ. (ಸಾಧ್ಯವಾದರೆ ಕ್ರಾಸ್ ಬಾರಿನ ಮೇಲೊಂದು ಕೂಸನ್ನೂ ಕೂರಿಸಿರಿ.) ಅವನ ಮುಖಭಾವವನ್ನೂ ನೋಡಿ ಬರೆಯಿರಿ, ಹಲ್ಲು ಕಿರಿದೇ ಇದ್ದನೇ, ಇಲ್ಲಾ, ಹಿಂಡಿದ ಮುಖವೇ ಎಂದು. ಆ ಮೇಲೆ ನಳಿನಿ ಅವನೊಡನೆ ನಡೆದು ಬರುವಾಗ ನಗೆಪಾಟಲಿಗೀಡಾದಾಳು!

ಇತಿ,

ಅರ್ಧಾಂಗಿ.

ವಿ.ಸೂ.– ಈಗತಾನೇ ನಿಮ್ಮ ಮಗಳು ಮತ್ತೊಂದು ಸೂಚನೆ ಕೊಟ್ಟಳು. ಹುಡುಗ ಹಿಂದೀ ಫಿಲ್ಮ್ ಗೀತೆ ಹಾಡಬಲ್ಲನೇ, ಅಡಿಗೆ ಬರುತ್ತೆಯೇ ವಿಚಾರಿಸಿ ಬರೆಯಿರಿ.

'ಅ'

......................

........ಹೇಳಿದ್ದಕ್ಕೆ ಹೂಗುಟ್ಟುವುದು ಮರೆತುಹೋದ ಹಾಗೆ ತೋರುತ್ತೆ, ಹರಹರಿಗೆ ಹೋದಂದಿನಿಂದ! ಅಡಿಗೆಗೂ ಹಿಂದೀ ಹಾಡಿಗೂ ಏನು ಸಂಬಂಧ ಎಂದು ಕೇಳಿದ್ದೀರಿ! ಅಷ್ಟೂ ಅರ್ಥವಾಗುವುದಿಲ್ಲವೇ! ನಳಿನಿ ನಾಲ್ಕಾರು ಸಭೆಗಳಲ್ಲಿ ಭಾಷಣ ಮಾಡಬೇಕಾದಾಗ, ನರಹರಿ ನಳಪಾಕ ಇಳಿಸಿಡಬೇಡವೇ? ಸಂಗಡವೇ ಫಿಲ್ಮೀಗಾನೇ ಗಾಯಿಸುತ್ತಿದ್ದರೆ, ಆಜೂ ಬಾಜು, ಅಕ್ಕಪಕ್ಕದವರಿಗೆ, ಅವನು ಮಾಡಲು ಕೆಲಸವಿಲ್ಲದೆ ಆರಾಮವಾಗಿ ಆಲಾಪಿಸುತ್ತಿರುವನೆಂಬ ಭಾವನೆ ಬರುಲ್ಲವೇ?........

ಇತಿ,

ಧರ್ಮಪತ್ನಿ.

......................

........ಚೆನ್ನಾಯಿತು! ನಿಮ್ಮ ಖರ್ಚಿನಲ್ಲಿ ಹಿಟ್ಟು, ಸಕ್ಕರೆ ಇತ್ಯಾದಿ ಸಪ್ಲೈ ಮಾಡಿರೆಂದು ಹೇಳಿದವರು ಯಾರು! ಹರಹರಿಗೆ ಹೋಗಿ, ನಿಮ್ಮ ಬುದ್ಧಿ ಪೂರಾ "ಹರೋಹರ"ವೇ ಆಗಿದೆ! ಆ ನರಹರಿ ಗಾಡಿ ನೂಕುವುದಕ್ಕೂ, ಸೈಕಲ್

ಸವಾರಿಗೂ ನಿಮ್ಮನ್ನ ಶಿಕ್ಷಕನಾಗಿ ಕರೆದನೇ! ಸೈಕಲ್: ತಳ್ಳಲು ಹೋಗಿ, ಸಕಲವೂ ನೆಲಪಾಲಾಯಿತು. ಜೇಬಿನಲ್ಲಿದ್ದ ನೆಶ್ಯದ ಡಬ್ಬಿ ಸಹ ಎಂದು ಬರೆದು ಕೊಂಡಿದ್ದೀರಲ್ಲಾ ಬೆರಳು ಹೇಗೆ ಓಡಿತು ಅನ್ನುತ್ತೇನೆ! ನೆಶ್ಯದ ಡಬ್ಬಿಯು ನಷ್ಟವೇ ನಿಮಗೆ ಮುಖ್ಯವಾದ ವ್ಯಸನವಾಗಿರುವ ಹಾಗೆ ಕಾಣುತ್ತೆ ನಿಮ್ಮ ಕಾಗದ ಓದಿದರೆ!

ನಿಮ್ಮ ಸಮರ್ಥತೆ ಇವತ್ತು ಕಂಡು ಹಿಡಿದೆನೇ! ಏನೋ ಕರೀಮಣಿ ಕಟ್ಟಿಸಿಕೊಂಡದ್ದಕ್ಕೆ ಇದೊಂದು ಕೆಲಸಕ್ಕಾದರೂ ಬರುತ್ತೀರೇನೋ ಎಂದು ಕನಸು ಕಂಡೆ. ಚೆನ್ನಾಗಿ........!

ಮಧ್ಯಾಹ್ನದ ರೈಲಿಗೆ ನಾನೇ ಬರುತ್ತೇನೆ.

ಇತಿ,

ಯಜಮಾನಿ.

**ವಿ.ಸೂ.**—ಈ ಸಾರಿ ವಾರ್ಷಿಕ ಬಡ್ಜೆಟ್ಟಿನಲ್ಲಿ ಸ್ಯಾಂಕ್ಷನ್ ಮಾಡೋಣವೆಂದಿದ್ದ ಕೋಟನ್ನು ನಿಮ್ಮ ಕಾರ್ಯ ಚೆಪ್ಪರತೆಗಾಗಿ ಕ್ಯಾನ್ಸಲ್ ಮಾಡಿದ್ದೇನೆ!

---




ಮಕ್ಕಳುಣ್ಣೋ ಕಾಲಕ್ಕೆ, ಬರಬಂತು.




ಗಿಣಿಯು ಪಂಜರದೊಳಿಲ್ಲಾ !
ಬರಿ ಬರಿಯೇ ಬರಿ ಪಂಜಾರವಾಯಿತಲ್ಲಾ !!

ಅಯ್ಯ! ನಿನ್ನ ಮಾತ ಕೇಳಿ!
ದೆಯ್ಯದಂತ ಗಿಣಿಯ ಕೂಡಿ!
ಸೊಕ್ಕಿ ಸೊಕ್ಕಿದ ರಕ್ಕಸಾನು
ಹಾರ್ಸಿಕೊಂಡೇ ಹೋದನಯ್ಯೊ !!

ಅಂಗೈಲ್ಬಿದ್ದಿದ್ದಾ ಗಿಣಿ.
ಅನ್ಯಾಯ ಮಾಡಿದ್ಲಾ ಗಿಣಿ.
ಅಂಗನೆಯೊಡನೆಯೇ ಹಾರಿಯೇ ಹೋಯ್ತಯ್ಯೊ !!
ಗಿಣಿಯು ಪಂಜರದೊಳಿಲ್ಲ !!
ಬರಿಬರಿಯೇ ! ಬರಿ ಪಂಜರವಾಯಿತಲ್ಲಾ !!

---

# ಕೈ ಹಿಡಿದಾಕೆ ಕಿಡಿ ಕಿಡಿ ಯಾಗೋದು ಯಾಕೆ ?

“ ಜಿ: ಕೈ ”

– ೧ –

ಅಂಗಡಿ, ಆಫೀಸ್, ಕೆಲಸ, ಕಾರ್ಯ,
ಏನೋ, ಎಷ್ಟೋ, ಗಂಡಸಿಗೆ;
ದುಡಿದೂ ದಣಿದೂ, ಹೊಟ್ಟೆ ಹಸಿದರೆ
ಹೋಟ್ಲಲ್ಲಿ ಕಳೆದು, ಸ್ನೇಹಿತರೊಂದಿಗೆ
ಸಿನಿಮ ನೋಡಿ, ಮನೇಗೆ ಬರೋದು
ಹನ್ನೊಂದು ಗಂಟೆ, ಹೊತ್ತಾಗಿ, ರಾತ್ರಿ;
“ಇಷ್ಟು ಹೊತ್ತಾಯ್ತು ಆಫೀಸಿನಲ್ಲಿ!?
ಏನು ಕೆಲಸವ್ರೊ, ಮೈಗಾಗುತ್ತೆ?
ನನಗೂ ಹಸಿವು, ಊಟಕ್ಕೇಳಿ;?
ಎಂದು ಮನೆಯಾಕೆ ಹತ್ತಿರಕ್ಕೆ ಬಂದ್ರೆ,
ನಾ ಮುಖನೇ ನೋಡ್ದೆ ‘ನಂಗ್ಹಸಿವಿಲ್ಲ’
ಅಂದ್ಮಾತ್ರಕ್ಕೇ
ಕೈಹಿಡಿದಾಕೆ ಕಿಡಿಕಿಡಿಯಾಗೋದು ಯಾಕೆ?

– ೨ –

ಬರೋ ಸಂಬ್ಳ ಸಿನಿಮ ಹೋಟಲ್
ಸಿಗರೇಟ್ ಖರ್ಚಿಗೆ,
ಮೇಲ್ಬರಮಾನ ಮನೆ ಖರ್ಚಿಗೆ
ಮನೆಯಾಕೇಗೆ;
ಸರಿಯಾಗಿಲ್ವೆ ನನ್ನೇರ್ಪಾಟು?
“ಎಷ್ಟೆಷ್ಟು ಬಂತು, ಏನೇನು ಖರ್ಚು?
ಮಕ್ಳು ಮರೀಗೆ, ಬಟ್ಟೆ ಬರೇಗೆ,
ತಿಂಡಿ ತೀರ್ಥ, ಒಡವೆ, ವಸ್ತ್ರ,
ಇನ್ನು ಮನೇಗೇನು? ಪಾತ್ರೆ ಪದಾರ್ಥ....”
ಎನ್ನೋ ಮಡದಿಯ ಪ್ರಶ್ನೇಗೆ ಉತ್ತರ,—

"ನಾತಂದ್ದಾಕೋದು; ನೀವ್ತಿಂದ್ದಾಕೋದು",
ಅಂತನಾನಂದ್ದ್ಮಾತ್ರಕ್ಕೇ
ಕೈಹಿಡಿದಾಕೆ ಕಿಡಿಕಿಡಿಯಾಗೋದು ಯಾಕೆ?

— ೩ —

ಮಗಳಿಗೆ ವರ್ಷ ಹದಿನೆಂಟಾಯ್ತು,
ಮಗನಿಗೆ ಹದಿನಾಲ್ಕಾಯಿತು, ಮೊನ್ನೆಗೆ;
ಇನ್ನು ಮದುವೆ, ಮುಂಜಿ, ಎಂದು
ಎಂತು, ಹೇಗೆ, ಎತ್ತ?
ಮನೆ, ಮಕ್ಳು, ಎಲ್ಲಾ ಮರೆತು
ಕೆಲಸ, ಕೆಲಸ, ಕೆಲಸ, ಕೆಲಸ,
ಏನೋ ಕೆಲಸ!?
ಎಂದರೆ ಅರಿಯದ ಹೆಣ್ಣು,
ಜಾಣ, ಮಾತೇ ಇಲ್ಲದೆ ಕಣ್ಣರೆಮುಚ್ಚಿ,
ಹೊಗೆಯನು ಬಿಡುತಾ ಸುಮ್ಮನೆ ಕುಳಿತರೆ
ದುಡಿಯೋ ಗಂಡು,
ಮೌನವ ಸಹಿಸದೆ ಕೈಹಿಡಿದಾಕೆ
ಕಿಡಿ ಕಿಡಿಯಾಗೋದು ಯಾಕೆ?

— ೪ —

"ಅಣ್ಣನ ಮಗಳಿಗೆ ನಿಶ್ಚಯವಾಗಿದೆ
ಒಳ್ಳೆಯ ವರ; ಅವ ನಮ್ಮತ್ತೆಯ ಮಗನೇ!
ಆರೇಳ್ವರ್ಷವೆ ಆಯಿತು
ನಾನೂ ಹೋಗಿ, ತಂದೆಯ ಮನೆಗೆ;
ನೀವೂ ಬನ್ನಿ, ಮದುವೆಗೆ ಬಂದು
ನನ್ನಿ'ಟ್ಬನ್ನಿ'
ಎಂದವಳೆನ್ನನು ಅಂಗ್ಲಾಚಿಕೊಂಡ್ರೆ,
'ಉಃ, ಪುರಸೊತ್ತಿಲ್ಲ; ಮನೆಯಲ್ಯಾರು?
ಮಕ್ಕಳಿಗಿಸ್ಕೂಲ್; ಹೋಗದಿದ್ದ್ರೇನು?
ಆಗದೆ ಮದುವೆ?' ಎಂದಂದ್ಮಾತ್ರಕ್ಕೇ
ಕೈಹಿಡಿದಾಕೆ ಕಿಡಿ ಕಿಡಿಯಾಗೋದು ಯಾಕೆ?
ಯಾಕೋ ಏನೋ ಯಾರಿಗ್ಗೊತ್ತು?
ಪಾಪ, ದುಡಿಯೋ ಗಂಡಸಿಗೇನು ಗೊತ್ತು?!

——— o ———

# ಗುರುದೇವನೆ?

“ಉಪಾಧ್ಯಾಯ ಮಹಾಶಯರೆ! ಭಾರತದ ಮುಂದಿನ ಜನಾಂಗವನ್ನು ತಿದ್ದಿ ಸತ್ಪ್ರಜೆಗಳಾಗಿಸುವುದು ನೀವೇ! ನಿಮ್ಮದು ಪರಮ ಪೂಜನೀಯವಾದ ವೃತ್ತಿ. ನಿಮಗೆ ದೇಶ ಎಷ್ಟು ಋಣಿಯಾಗಿದೆ, ಎಂಬುದನ್ನು ನೀವು ಅರಿತು ಕೊಳ್ಳಬೇಕು” ಎಂದು ಸರ್ದಾರ್ ಪಟೇಲರಿಂದ ಹಿಡಿದು ನಮ್ಮೂರು ಪಟೇಲರ ವರೆಗೂ, ಎಲ್ಲರೂ ಮಾತಾಡಿದ್ದೂ ಮಾತಾಡಿದ್ದೇ. ಹೌದು ಎಷ್ಟು ಋಣಿಯಾಗಿದೆ ಎಂಬುದನ್ನು ಉಪಾಧ್ಯಾಯರು ಅರಿತಿದ್ದಾರೆ. ಅವರಿಗೆ ಈಗ ಬರುತ್ತಿರುವ ಸಂಬಳ ತಿಂಗಳಿಗೆ ೨೫ ರೂ; ಕೊಡಬೇಕಾದದ್ದು ೭೫; ಋಣ ತಿಂಗಳಿಗೆ ೫೦ ರೂಪಾಯಿ; ವರ್ಷವೊಂದಕ್ಕೆ ೬೦೦ ರೂಪಾಯಿ; ಇಡೀ ಸರ್ವಿಸ್ ೩೦ ವರ್ಷಗಳಲ್ಲಿ ೧೮,೦೦೦ ರೂಪಾಯಿ ಬಡ್ಡಿಯೂ ಸೇರಿ ೨೦೩೦೮ ರೂ.—ದೇಶ ಅವರಿಗೆ ಋಣಿಯಾಗಿದೆ. ಇದನ್ನು ಉಪಾಧ್ಯಾಯರೇನೋ ಅರಿತಿದ್ದಾರೆ. ಆದರೆ, ಸಮಾಜದ ಪರವಾಗಿ ಸರ್ಕಾರ ಅರಿತುಕೊಳ್ಳಬೇಕೆಂಬುದೇ ಬಿನ್ನಹ.

ಮುಂದಿನ ಜನಾಂಗವನ್ನು ತಿದ್ದಿ ಸತ್ಪ್ರಜೆಗಳಾಗಿಸುವುದು ಉಪಾಧ್ಯಾಯರ ಕರ್ತವ್ಯ. ಹೌದು. ಆದರೆ, ಇದು ನಿಜವಾಗಿಯೂ ಸಾಧ್ಯವೆ? ಸಾಧ್ಯವಾಗುತ್ತಿದೆಯೆ? ಯೋಚನೆ ಮಾಡೋಣ.

೧) ಮುಂದಿನ ಜನಾಂಗ ಎಂದರೆ, ಈಗಿನ ಮಕ್ಕಳು; ಅವರೆಲ್ಲರನ್ನೂ ಮಾತಾಪಿತೃಗಳು ಶಾಲೆಗಳಿಗೆ ಕಳುಹಿಸುತ್ತಿಲ್ಲ. ಕಳುಹಿಸಿದವರೆಲ್ಲರೂ ಶಾಲೆಗೆ ಬಂದು ಸೇರುತ್ತಿಲ್ಲ. ಸೇರಿದರೂ, ಕೂರುತ್ತಿಲ್ಲ. ಕೂತರೂ ಕಲಿಯುತ್ತಿಲ್ಲ. ಕಲಿತರೂ, ನಾಲ್ಕು ವರ್ಷಗಳಾದರೂ ಅವಿಚ್ಛಿನ್ನವಾಗಿ ವಿದ್ಯಾರ್ಜನೆಯನ್ನು ಮುಂದುವರಿಸುತ್ತಿಲ್ಲ. ೧೦೦ ಮಕ್ಕಳ ಪೈಕಿ, ೩೦ನ್ನು ಕಳುಹಿಸಿದರೆ ಅವರ ಪೈಕಿ ೨೭ ಶಾಲೆ ಸೇರಿ, ೨೫ ಕೂತು. ೨೦ ಕಲಿತು, ೬ ಮಧ್ಯೆ ಓದು ನಿಲ್ಲಿಸಿ, ೧೪ ಉಡುಗರು ಮಾತ್ರ ಉಪಾಧ್ಯಾಯರಿಂದ ತಿದ್ದಿಸಿಕೊಳ್ಳುತ್ತಿದಾರೆ. ಬಹುಸಂಖ್ಯೆಗೆ ಸಂಪೂರ್ಣಾಧಿಕಾರ ಎಂಬ ರಾಜ ತಂತ್ರದ ಪ್ರಕಾರ, ನಾಳೆ ೧೪ ಹುಡುಗರನ್ನು, ಉಳಿದ ೮೬ ಹುಡುಗರು ವೋಟು ಮಾಡಿ ಸೋಲಿಸಿ ಮಟ್ಟ ಹಾಕೆಬಿಡ್ತಾರೆ.

೨) ದೇಶದ ಇಷ್ಟು ಕಡಮೆ ಸಂಖ್ಯೆಯ ಮಕ್ಕಳನ್ನಾದರೂ ಉಪಾಧ್ಯಾಯರು ಸರಿಯಾಗಿ ತಿದ್ದಬಲ್ಲರೆ? ಇದಕ್ಕೆ ಬೇಕಾದದ್ದು, ಮಕ್ಕಳಿಗೆ ಗುರುವಿನ ಮೇಲೆ ಪ್ರೀತಿ, ವಿಶ್ವಾಸ, ಗೌರವ ಬುದ್ಧಿ. ಆದರೆ, ಇವೇ ಈಗ ಶೂನ್ಯ.

ಏಕೆಂದರೆ, ತನಗೆ ರುಚಿಸದೆ ಇರುವ ವಿಷಯಗಳನ್ನೇ ಮಾಸ್ತರು ಕಲಿಸುತ್ತಿರುವುದು; ಅಥವಾ ರುಚಿಸಿದರೂ, ಅಪ್ರಯೋಜಕ ವಿಷಯಗಳನ್ನೇ. ವಾಲ್ ಫರ್ರೈಸೋ ಎಲ್ಲಿದೆ, ಕಿಲಿ ಮುಂಜಾರ್‍ರೋ ಎಂದರೇನು, ಷಿಕಾಗೋದಲ್ಲಿ ಏಕೆ ದನಗಳನ್ನು ಕೊಲ್ಲುತ್ತಾರೆ, ಆಸ್ಟ್ರೇಲಿಯಾದಲ್ಲಿ ಉಣ್ಣೆ ತಯಾರಾಗಲು ಕಾರಣವೇನು, ರಾಮಯ್ಯ ಈ ಬಾಳೆ ಗಿಡವನ್ನು ನೋಡು, ನೀನಾರಿಗಾದೆಯೋ ಎಲೆಮಾನವಾ, ಮಕ್ಕಳನೆತ್ತಿ ಮುದ್ದಾಡದ ಕೈ ಮರಗೈ ಮರುಳ್‌ಗೈ—ಎಂಬ ವಿಷಯಗಳನ್ನು, ಹಿಂಸಾ ಸಮೇತವಾಗಿ ಹೇಳಿಕೊಡುವ ಮಹನೀಯರ ಮೇಲೆ ಅವರಿಗೆ ಹೇಗೆತಾನೆ ಗೌರವ ಬಂದೀತು? ಅಲ್ಲದೆ, ಬಡಮೇಷ್ಟ್ರು ಎಂದು ಸದಾ ಸುತ್ತ ಮುತ್ತ, ಎಲ್ಲರೂ ಹೀಯಾಳಿಸುವ ಹರಕು ಬಟ್ಟೆಯ ಗುರುದೇವನಿಗೆ ಅವರು ಮರ್ಯಾದೆ ಸಲ್ಲಿಸುವುದಸಂಭವ....ಮಗು ನೋಡುತ್ತಿರುತ್ತದೆ: ತನ್ನ ತಂದೆ ಕಾರಲ್ಲಿ ಬಂದವರಿಗೆ ಕೈ ಮುಗಿಯುತ್ತಾನೆ; ಆದ್ದರಿಂದ ಕಾರಲ್ಲಿ ಬರುವವರು ಮಾತ್ರ ದೊಡ್ಡವರು ಎಂದು ಅದು ನಿಶ್ಚಯಿಸುತ್ತದೆ. ತನ್ನ ತಂದೆ ಕಾಕಿಯಲ್ಲಿ ಬರುವವರಿಗೆ ಮಾತ್ರ ಹೆದರುತ್ತಾನೆ. ಆದ್ದರಿಂದ, ಕಾಕಿಗೆ ಹೆದರಬೇಕು ಎಂದು ಅದು ನಿಶ್ಚಯಿಸುತ್ತದೆ. ಪ್ರೈಮರಿ ಶಾಲೆಯ ಉಪಾಧ್ಯಾಯರಿಗೆ ಕಾರೂ ಇಲ್ಲ; ಕಾಕಿಯೂ ಇಲ್ಲ; ಹಳೇ ಮುರುಕಲು ಪರಂಗಿ ಟೋಪಿ ಕೂಡ ಇಲ್ಲ. ಆದ್ದರಿಂದ ತಂದೆ ಅವರನ್ನು ಗೌರವಿಸುವುದಿಲ್ಲ; ಮಕ್ಕಳೂ ಗೌರವಿಸುವುದಿಲ್ಲ. ಹೀಗಾಗಿ, ಅವರಿಗೆ ಮುಂದಿನ ಜನಾಂಗವನ್ನು ತಿದ್ದಲು ಅವಕಾಶವೆಲ್ಲಿ?

೩) ಮತ್ತೊಂದು ಮುಖ್ಯ ವಿಷಯ. ವರ್ಷವೊಂದಕ್ಕೆ ಶಾಲೆಯಲ್ಲಿ ಪಾಠದ ಕೆಲಸ ೨೦೦ ದಿನಗಳಿರುತ್ತವೆ. ದಿನವೊಂದಕ್ಕೆ ೫ ಗಂಟೆ ಪಾಠ ಎಂದಿದ್ದರೂ, ಗಡಿಯಾರದ ಅಭಾವ, ಅದಲುಬದಲು, ನಿಧಾನ—ಇತ್ಯಾದಿಗಳಿಂದ ೪ ಗಂಟೆ ಮಾತ್ರ ಸುಸೂತ್ರವಾಗಿ ನಡೆಯುತ್ತದೆ. ೨೦೦ ದಿನಗಳ ಪೈಕಿ, ಮಾಸ್ತರ ರಜಾ ದಿನಗಳು ೨೦ ದಿನ, ಹುಡುಗರ ಚಕ್ಕರ್ ದಿನಗಳು ೩೦, ಉಪಾಧ್ಯಾಯರು ತಿಂಗಳು ತಿಂಗಳಿಗೂ ಸಂಬಳಕ್ಕಾಗಿ ತಾಲ್ಲೂಕ್ ಕಚೇರಿಗೆ ಅಲೆಯಲು ತೆಗೆದುಕೊಳ್ಳುವ ೩ ದಿನ ಅಂದರೆ, ವರ್ಷಕ್ಕೆ ೨೫ ದಿನ—ಹೀಗೆ ಉಪಾಧ್ಯಾಯರಿಗೂ ವಿದ್ಯಾರ್ಥಿಗೂ ಒಟ್ಟು ೧೨೫ ದಿನ ಮಾತ್ರ ಸಂಬಂಧವಿರುತ್ತದೆ. ಅಂದರೆ ವರ್ಷದಲ್ಲಿರುವ ೮೭೬೦ ಗಂಟೆಗಳ ಪೈಕಿ ಕೇವಲ ೫೦೦ ಗಂಟೆಗಳು ಮಾತ್ರ; ರೂಪಾಯಿಗೆ ಹನ್ನೊಂದು ಕಾಸಿನಷ್ಟು ಮಾತ್ರ. ಉಳಿದ ೧೫ ಆಣೆ ೧ ಕಾಸಿನಷ್ಟು ಕಾಲ, ಮುಂದಿನ ಜನಾಂಗವನ್ನು ತಿದ್ದುವವರು, ತಂದೆ ತಾಯಿ ನೆರೆಹೊರೆ ನಂಟ ಇಷ್ಟ—ಇವರು!

೪) ಆ ಒಂದು ಕಾಸಿನಷ್ಟು ಕಾಲದಲ್ಲಿ ಉಪಾಧ್ಯಾಯರು ೬೦ ಹುಡುಗರನ್ನು ತಿದ್ದಬೇಕಾಗಿದೆ. ಒಬ್ಬೊಬ್ಬ ಹುಡುಗನಿಗೂ ಸರಾಸರಿ ೬೦ ಡೊಂಕುಗಳಿದ್ದರೆ, ಒಂದು ಡೊಂಕನ್ನು ತಿದ್ದಲು ೧೦ ಗಂಟೆ ಕಾಲ ಹಿಡಿಯುವುದಾದರೆ,

ಅವನಿಂದ ಪ್ರತಿ ಹುಡುಗನ ಮುಕ್ಕಾಲು ಡೊಂಕನ್ನು ಮಾತ್ರ ತಿದ್ದಲು ಸಾಧ್ಯ —ಎಂಬುದನ್ನು ಗಣಿತಶಾಸ್ತ್ರ ಬಲ್ಲವರೆಲ್ಲರೂ ಒಪ್ಪುತ್ತಾರೆ.

೫) ೫೦೦ ಗಂಟೆಗಳ ಕಾಲ ಉಪಾಧ್ಯಾಯರು ಹೇಳಿಕೊಡುವ ಪಾಠ ಏನು? "ದೇವರನ್ನು ಪೂಜಿಸು; ಎಲ್ಲರನ್ನೂ ಅಣ್ಣ ತಮ್ಮಂದಿರೆಂದು ಭಾವಿಸು; ಸತ್ಯಮೇವ ಜಯತೆ; ದೇಶ ಸೇವೆಯೇ ಈಶ ಸೇವೆ; ಕೋಪವೆಂಬುದನರ್ಥ ಕಾರಕ; ಅಹಿಂಸೆಯೇ ಪರಮ ಧರ್ಮ" ಇದೇ ಅವನು ಹೇಳುವ ಪಾಠ.... ಆದರೆ, ಉಳಿದ ೮೨೬೦ ಗಂಟೆಗಳಲ್ಲಿ, ಅದೇ ಹುಡುಗನಿಗೆ ತಂದೆ ತಾಯಿ ನಂಟ ಇಷ್ಟ, ನೆರೆ ಹೊರೆ ಹೇಳಿಕೊಡುವ ಪಾಠ ಏನು? "ಸಾವಿರ ಸುಳ್ಳು ಹೇಳಿದರೂ ಚಿಂತೆ ಇಲ್ಲ, ಒಂದು ಸತ್ಯನಾರಾಯಣ ಪೂಜೆ ಮಾಡಿದರಾಯಿತು; ಎದುರು ಮನೆಯವನು ಒಕ್ಕಲಿಗ, ಆಚೆ ಮನೆಯವನು ಕುರುಬ; ಅತ್ತಕಡೆ ಕೇರಿಯವರು ಹೊಲೆಯರು, ಅವನೊಬ್ಬ ಹಾರವ; ಅಲ್ಲಿಗೆ ಹೋಗಬೇಡ, ಅವನನ್ನು ಮಾತ ನಾಡಿಸಬೇಡ; ಅವನ ಜಾತಿ ಬೇರೆ, ನಮ್ಮ ಜಾತಿ ಬೇರೆ; ಅವನ ಜಾತಿ ನೀಚ, ನಮ್ಮ ಜಾತಿ ಮೇಲಿನದು; ಸುಳ್ಳು ಹೇಳಿದರೆ ಕೆಲಸ ಕಾರ್ಯಗಳು ಸುಲಭ, ಪತ್ತೆ ಆಗಬಾರದು, ಅಷ್ಟೆ; ದೇಶ ಹೇಗಾದರೂ ಹೋಗಲಿ, ಯಾರು ಉಪವಾಸ ಬಿದ್ದರೂ ಬೀಳಲಿ, ನಾವು ಊಟಮಾಡಿದರಾಯಿತು; ಎರಡನೆಯ ಮಾತಿಗೆ ಏಟು ಕೊಡದವನು ಹೇಡಿ" ಇತ್ಯಾದಿ ಪಾಠವನ್ನು ಅವನು ತಾಯಿ ತಂದೆಯ ರಿಂದ ಕಲಿಯುತ್ತಾನೆ.

ಆದ್ದರಿಂದ, ಉಪಾಧ್ಯಾಯ ವೃತ್ತಿಯಲ್ಲಿರುವ ಮಾಸ್ತರುಗಳೂ ನನ್ನಂಥ ಮೇಡಮ್ಮುಗಳೂ, "ನೀವೇ ಮುಂದಿನ ಜನಾಂಗವನ್ನು ತಿದ್ದಿ ಸರಿಪಡಿಸುವವರು" ಎಂದು ದೇಶವಿನಾಯಕರು ಭಾಷಣ ಮಾಡುವಾಗ, ಒಳಗೊಳಗೇ ನಗುವುದರಲ್ಲಿ ಆಶ್ಚರ್ಯವೇನು?

—ಶ್ರೀಮಂತ ಕೇಸ.



# ನಂಬರ ಮೋಹಿನಿ



★ ಎಸ್ವಿ ★

ನಮಗ್ಯಾರಿಗೂ ಶೀನುವಿನ ಈಚೀಚಿನ ವರ್ತನೆ ಸ್ವಲ್ಪವೂ ಅರ್ಥವಾಗಿರಲಿಲ್ಲ. ಕೇವಲ ಕೆಲವು ದಿನಗಳ ಕೆಳಗೆ ಕೇಂದ್ರ ಸರ್ಕಾರದ ಪರೀಕ್ಷೆಗೆಂದು ಅವನು ಮದ್ರಾಸಿಗೆ ಹೋಗಿದ್ದ. ಹೆಚ್ಚಾಗಿ ಓದಿ, ಓದಿ ಏನಾದರೂ ಹುಚ್ಚು ಹಿಡಿಯಿತೇ—ಎಂದೂ ಗಾಬರಿಯಾಗಿತ್ತು!

ಶೀನು ಮೊನ್ನೆ ತಾನೊಬ್ಬನೇ walk ಹೊರಟಿದ್ದ. ದಾರಿಯಲ್ಲಿ Aban-don ಮಾಡಿದಂತಿದ್ದ ಒಂದು ಕಾರು ನಿಂತಿತ್ತು. ಅದೇನೂ ಹೊಸಮಾದರಿಯದಲ್ಲ 1927-28ನೇ ಇಸವಿಯದೇನೋ! ಹೊಸದಾಗಿ ಬಣ್ಣವೂ ಕಂಡಿರಲಿಲ್ಲ— ಒಳಗೂ ಯಾರೂ ಇರಲಿಲ್ಲ. ಆದರೂ ಶೀನೂಗೆ ಮಾತ್ರ ಅದು ಚೆನ್ನಾಗಿ ಕಂಡಿರಬೇಕು. ಹತ್ತಿರ ಹೋಗಿ ಅದರ ನಂಬರ್ ಹಲಗೆಯ ಮೇಲೆ ಬೆರಳಾಡಿಸುತ್ತಿದ್ದ. ಅದೇನೂ ಅಂಥಾ ಆಕರ್ಷಣೀಯ ಅಂಕಿಯೂ ಆಗಿರಲಿಲ್ಲ—No. A.B.C. 2740- ಸರ್ವಸಾಮಾನ್ಯ- -ಶೀನುವೇನು ಅನಕ್ಷರಸ್ಥನಲ್ಲ—B.E. ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸಿನಲ್ಲಿ ಪಾಸಾಗಿದ್ದ. ಹಾಗಾದರೆ ಮತ್ತೇನು ಆಕರ್ಷಣೆ? ಎಳೆಯ ಮಕ್ಕಳು ಖುಷಿಯಾದಾಗ ಪೆಪ್ಪರ ತಿಂದ್ದವಂತೆ ನಾಲಗೆಯನ್ನು ಅರ್ಧಂಗಲ ಚಾಚಿ, ಕಣ್ಣನ್ನು 5-6 ಡಿಗ್ರಿಗಳು ಒಲಕ್ಕೆ ಬಾಗಿಸಿ, ಅತ್ಯಂತ ಅಭಿಲಾಷೆಯಿಂದ ಆ ಅಂಕಿಗಳ ಅಭ್ಯಾಸಮಾಡುತ್ತಿದ್ದ. "ಇದೇನೋ! ಶೀನೂ—ಪುನಃ ಮಗುವಾಗಬೇಕೆಂದು ಆಸೆಯೇನೋ? ' ಎಂದು ನಾವು ಹೇಳಿದಾಗಲೇ ಅವನಿಗೆ ಎಚ್ಚರ. "ಏನೂ ಇಲ್ಲ—ಸುಮ್ಮನೆ" ಎಂದು ಹೇಳಿ, ನಮ್ಮ ಜೊತೆ ಸೇರಿದ.

ಅವನನ್ನು ಗೇಲಿ ಎಬ್ಬಿಸಲು ಇದು ಒಂದು ಅವಕಾಶವಾಯಿತೇ ಹೊರತು ಅವನ ವರ್ತನೆಗೆ ಕಾರಣ ತಿಳಿಯಲಿಲ್ಲ.

ರೇಸಿನಂತೆ ವೇಗವಾಗಿ ಚಲಿಸುವ ಕಾರುಗಳನ್ನೂ ಶೀನು ಬಿಟ್ಟಂತೆ ಕಾಣಲಿಲ್ಲ. ಅವನ ಬಳಿಗೆ ಕಂಡ ಕಾರು ಬಳಿದು ಕನಿಷ್ಟಪಕ್ಷ ಒಂದು ಫರ್ಲಾಂಗಾದರೂ ಹಿಂತಿರುಗಿ ನೋಡದೆ ಇರುತ್ತಿರಲಿಲ್ಲ. ಎಲ್ಲಿ ಕತ್ತು ಕಳಚಿ ಕೆಳಕ್ಕೆ ಕುಸಿದು ಬೀಳುವುದೋ ಎಂದು ನಮಗೆ ಗಾಭರಿ.

ಎಷ್ಟೋ ಮನೆಗಳೂ ಕೂಡ ಅವನ ಮನಸ್ಸಿನ ಮೇಲೆ ಇಷ್ಟೇ ಪ್ರಭಾವ ವನ್ನು ಬೀರಿದ್ದವು. ಮೊನ್ನೆ stationಗೆ ಹೊರಟೆವು. ಹೊತ್ತಾಗಿದ್ದರಿಂದ ಒಂದು ಗಲ್ಲಿ ಹಿಡಿದೆವು. ಕಾಡು ಹಂಚುಗಳು, ಮಣ್ಣಿನ ಗೋಡೆ, ಕಿಟಕಿಗಳ ಬದಲು ಗೋಡೆಯಲ್ಲಿಯ ರಂಧ್ರಗಳು— ಇವುಗಳಿಂದ ಅಲಂಕೃತವಾದ ಒಂದು ದಿವ್ಯಭವನ ಶೀನೂ ಕಣ್ಣಿಗೆ ಬಿತ್ತು. ಹಿಂದೆ ನೋಡುತ್ತಲೇ ಮುಂದೆ ಮುಂದೆ ಹೆಜ್ಜೆ ಹಾಕಿದ. ಹೇಗೆ ತಾನೆ ಗಲ್ಲಿ ಮಧ್ಯೆ ನಡೆಯುವುದಕ್ಕಾದೀತು? ಸ್ವಲ್ಪ ದೂರದಲ್ಲೇ ಚರಂಡಿಗಾಗಿ ತರಿಸಿದ್ದ ಚಪ್ಪಡಿಗಲ್ಲನ್ನು ಶೀನು ಎಡವಿಬಿದ್ದಾಗಲೇ ಅವನಿಗೆ ಎಚ್ಚರ! ಏನಿರಬಹುದೆಂದು ನಾವೂ ನೋಡಿದೆವು ಹಿಂತಿರುಗಿ. ಬರೀ ಬೀಗ ಹಾಕಿದ ಬಾಗಿಲು! ಅದರ ಮೇಲೆ ಟಾರಿನಲ್ಲಿ ಬಳಿದ ಮಾಸಿಹೋಗಿದ್ದ 474 ನಂಬರು— ಅಷ್ಟೇ! ಅದರಲ್ಲೇನಿದೆ ಆಶ್ಚರ್ಯ? ಶೀನೂಗೇನಾದರೂ ಹಗಲುಗನಸೇ ಎನ್ನಿಸಿತು.

ದುರದೃಷ್ಟವಶಾತ್ ಅವನು ನಮ್ಮೊಡನೆ ಸೈಕಲ್ ಮೇಲೆ ಬಂದರೆ, ನಮ್ಮ ಜವಾಬ್ದಾರಿ ಹೇಳತೀರದು. ನಮ್ಮ ಸೈಕಲ್ಲಿಗೆ ಡಿಕ್ಕಿ ಹೊಡೆಯುವುದಿರಲಿ— ಅದೆಲ್ಲಿ ಈ ರೀತಿ ಹಗಲು ಗನಸು ಕಂಡು, ಒಬ್ಬ ಮುದುಕನ ಮೇಲೋ, ಹುಡು ಗನ ಮೇಲೋ ಸೈಕಲ್ ಹಾರಿಸಿ ಹೋಗುವನೋ ಎಂದು ಗಾಭರಿ. ತಾನೊ ಬ್ಬನೇ ಹೊರಟಾಗ ಈ ಕಾರಣಕ್ಕಾಗಿಯೇ ಎಷ್ಟೋ ಬಾರಿ ಪೋಲೀಸಿನವರ ಕೈಗೆ ಸಿಕ್ಕಿಬಿದ್ದಿದ್ದಾನೆ!

ಎಂತೆಂಥಾ ಗುಟ್ಟನ್ನೇ ರಟ್ಟುಮಾಡಿದ ನಮಗೆ ಶೀನುವಿನ ಈ ವರ್ತನೆ ಸುಸ್ತುಮಾಡಿಸಿತು. ಒಂದು ದಿನ ಶೀನುವನ್ನೇ ಕೇಳಿದೆವು.

ಮೊದಲು ಮೊದಲು ಸತಾಯಿಸಿ, ಕಡೆಗೆ ಯಾರಿಗೂ ಹೇಳಬಾರದೆಂದು ಈ ರೀತಿ ಉಸಿರಿದ:—

ಮೊನ್ನೆ ಮದ್ರಾಸಿಗೆ ಪರಿಕ್ಷೆಗೆ ಹೋಗಿದ್ದನಲ್ಲ! ಅದೃಷ್ಟವಶಾತ್ ಅಲ್ಲಿ ಯಾರೂ ನೆಂಟರಿಲ್ಲದೆ ಯಾವುದೋ ಒಂದು ಹೋಟಲಿನಲ್ಲಿ ತಂಗಿದ. ಪರೀಕ್ಷೆ ಯಲ್ಲಿ ಮಗ್ನನಾಗಿದ್ದ ಶೀನೂ, ಅದು ಕಳೆದ ನಂತರ ಒಂದು ದಿನ ಆ ಹೋಟ ಲಿನ ನಂಬರನ್ನು ನೋಡಿದ—5/74. ಶೀನೂಗೆ ಏನೋ ಸಾಧಿಸಿದಷ್ಟು ಮುಖ ಕೆಂಪೇರಿತು! ಸರ್ರನೆ Hall ticketನ್ನು ಈಚೆಗೆ ಎಳೆದು ತಾಳೆ ನೋಡಿದ— ತನ್ನ ರಿಜಿಸ್ಟರ್ಡ್ ನಂಬರೇ ಅದು! ಓಹೋ! ಇದು ದೈವಲೀಲೆ. ತನಗೆ ಪರೀಕ್ಷೆಯಲ್ಲಿ ರ್‍ಯಾಂಕುಬರುವುದು (ಏನಿಲ್ಲದಿದ್ದರೂ 5ನೇ ರ್‍ಯಾಂಕು) ಖಂಡಿತ. ಅಷ್ಟಿಲ್ಲದಿದ್ದರೆ ದೇವರು ಈ ನಂಬರಿಗೇ ತನ್ನನ್ನು ಕರೆದೊಯ್ಯುತ್ತಿದ್ದನೇ— ಅನ್ನಿಸಿತು.

ಮದ್ರಾಸನ್ನು ನೋಡಲು ಟ್ರಾಂ ಅಷ್ಟು ಒಳ್ಳೆಯದಲ್ಲ—foot board ಮೇಲೆ ನಿಂತರೆ ಈಚೀಚೆಗೆ ಜುಲ್ಮಾನೆಯಂತೆ. ಶೀನೂ ಅದಕ್ಕಾಗಿಯೇ ಒಂದು Rickshaw ಹಿಡಿದ, Parrys corner ನಲ್ಲಿ ಆರಾಮವಾಗಿ ಕೂತು ನೋಡುತ್ತಾನೆ—Rick ನಂಬರು 47—ಮತ್ತೆ ಅದೇ 7, ಅದೇ 4. ಶೀನೂಗಂತು ಹುಚ್ಚು ಹಿಡಿದಂತಾಯಿತಂತೆ. ಮದ್ರಾಸನ್ನು ನೋಡುವುದನ್ನೇ ಮರೆತನಂತೆ!

ಮರುದಿನ "ಬೆಂಗಳೂರು ಎಕ್ಸ್‌ಪ್ರೆಸ್" ಹಿಡಿದ—ಕಾಫಿಗಾಗಿ ಇಳಿದರೆ, ಗಾಡಿ ಗುರುತು ತಪ್ಪೀತೆಂದು ಗಾಬರಿ. ಶೀನುವು ತನ್ನ Carriage ನ ನಂಬರು ಹುಡುಕಿದ 6407—ಕಣ್ಣರಳಿಸಿ ನೋಡಿದ—ಪುನಃ 7 ಮತ್ತು 4 ಹಾಜರಿದೆ. ಸ್ವಲ್ಪ ಸ್ಥಳ ಪಲ್ಲಟ! ಮಧ್ಯೆ ಒಂದೆರಡು ಅಂಕಿಗಳು! ಆದರೇನಂತೆ! ಅವನ ಹರ್ಷಕ್ಕೆ ಎಲ್ಲೆಯೇ ಇಲ್ಲ.

ಮೈಸೂರಿಗೆ ಬಂದ ಶೀನು. ಸಯ್ಯಾಜಿರಾವ್ ರೋಡಿನಲ್ಲಿ ಹೊರಟ—ಕಾಣಿಸಿತು ನಂ. 74—ಖುಷಿಯಿಂದ ನೋಡಿದ—ಅದು ಒಂದು shop. "English Hair Dressing & Shaving Salon"—ಆದರೇನಂತೆ! ಪರೀಕ್ಷೆಯ English ಪತ್ರಿಕೆಯಲ್ಲಿ Shave ಎಂದರ್ಥವೇ? ಇರಲಾರದು—ಇದೆಲ್ಲಾ Rank ಸಿದ್ಧ ಎಂದು ತೋರಿಸುತ್ತವೆ—ಎಂದು ಶೀನೂ ಧೈರ್ಯ ತಾಳಿದ.

ಹೀಗಾಗಿ ಶೀನೂಗೆ ಎರಡು ಅಂಕಿಗಳೆಂದರೆ ಪಂಚಪ್ರಾಣ:—7 ಮತ್ತು 4 ಅವು ಮತ್ಯಾವ ಅಂಕಿಗಳೊಡನೆ ಬೆರತಿದ್ದರೂ ಪರವಾಗಿಲ್ಲ. ಅವನ್ನು ನೋಡಿದರೆ ಸಾಕು.

—ಈ ಕಾರಣಕ್ಕಾಗಿಯೇ ಅವತ್ತು ಅವನು A.B.C. 2470 ಕಾರಿನ ನಂಬರನ್ನು ತಿದ್ದುತಿದ್ದುದು. ಅದಕ್ಕಾಗಿಯೇ 474 ನಂಬರಿನ ಮನೆಯನ್ನು ನೋಡುತ್ತಾ ಬಿದ್ದಿದ್ದು.

ಶೀನುವಿನ ಈ ಕಥೆ ಕೇಳಿ, ನಮಗೆ ನಗುವಿನ ಬದಲು ಕನಿಕರವಾಯಿತು. ಅವನು ನಿಜವಾಗಲೂ ಬುದ್ಧಿವಂತ—ಮೊದಲಿನಿಂದಲೂ ರ್‍ಯಾಂಕು ವಿದ್ಯಾರ್ಥಿ. ಈಗಲೂ ರ್‍ಯಾಂಕು ಬರಲೆಂದು ನಮ್ಮ ಆಸೆ. ಒಂದೇ ಮನಸ್ಸಿನಿಂದ ಶುಭಾಶಯ ಕೋರಿದೆವು.

ನೀವೂ ನಿಮ್ಮ ಶುಭಾಶಯವನ್ನು ಜಯವಿಟ್ಟು ಕಳುಹಿಸುವಿರಾ?

—o—



ಸಣ್ಣಮಾರನಹಳ್ಳಿಯಲ್ಲಿರುವ

ದೊಡ್ಡಣ್ಣಯ್ಯನವರಿಗೆ



ನಟಸಾರ್ವಭೌಮ ಶೋಕರಸವನ್ನು ಪ್ರದರ್ಶಿಸುವುದು—
ಟಿಕೇಟು ಕೊಂಡು ಬಂದವರ ಸಂಖ್ಯೆ ನೋಡಿ.

# ಒಂದು ಕಾಗದಕ್ಕೆ ಒಂದು ಉತ್ತರ



ನಾವು ಸಹಜವಾಗಿ ಮಾತನಾಡಿಕೊಳ್ಳುತ್ತಿದ್ದೆವು. ಸರಕಾರ ಹದಗೆಟ್ಟಿದೆ, ಹದಗೆಟ್ಟಿದೆ, ಬರೆದ ಕಾಗದಕ್ಕೆ ಉತ್ತರವೇ ಬರುಲ್ಲ, ಕೆಂಪು ಟೇಪಿನ ಮಹಿಮೆ, ಜಡಭರತನ ಆಡಳಿತ ಆಗಿಬಿಟ್ಟಿದೆ, ಹಾಗೆ.... ಹೀಗೆ...." ಎಂತ.

"ಸುಳ್ಳು ಸುಳ್ಳು!" ಎಂದ ಕಿಟ್ಟಿ ಟೇಬಲನ್ನು ಗುದ್ದುತ್ತಾ. "ನೀವೆಲ್ಲಾ ಸುಳ್ಳು ಬೊಗಳುತ್ತಿದೀರ. ಏನು ಕಾರಣ ಸರ್ಕಾರವನ್ನು ಟೀಕೆ ಮಾಡುತ್ತಿದೀರ...." ಯಾವಾಗಲೂ ಹಾಗೇ ನಮ್ಮ ಕಿಟ್ಟಿ. ತನ್ನದೇ ಒಂದು "ವೈಶಿಷ್ಟ್ಯ" ತೋರಿಸುತ್ತಾನೆ. ಅದೇನೋ "ಊರಿಗೊಂದು ದಾರಿಯಾದರೆ...." ಅಂತ ಹೇಳುತ್ತಾರಲ್ಲ ಹಾಗೆ.

"ಅಯ್ಯಾ, ನಿಮ್ಮ ಭಾಷಣ ಸಾಕುಮಾಡು. ನಮಗೆಲ್ಲಾ ಗೊತ್ತಿದೆ" ಎಂದು ಗೋವಿಂದ ನಡು ಬಾಯಿ ಹಾಕಿದ.

"ಏನು ಗೊತ್ತಿದೆ ನಿನಗೆ, ನಿನ್ನ ತಲೆ! ನನ್ನ ಅನುಭವವೇ ಸಾಕು, ನಿಮ್ಮ ಮಾತು ಸುಳ್ಳು ಎಂದು ಸಾರಲು—ಇಲ್ಲಿ ನೋಡಿ" ಎಂದು ಹೇಳಿ ಒಂದು ಫೈಲನ್ನೇ ತೆಗೆದು ಮುಂದಿಟ್ಟ. "ನಾನು ಎರಡು ವರ್ಷದಲ್ಲಿ ಬರೆದ ಪ್ರತಿಯೊಂದು ಕಾಗದಕ್ಕೂ ಉತ್ತರ ಈ ಫೈಲಿನಲ್ಲಿದೆಯೋ ಇಲ್ಲವೋ ನೋಡಿ. ಸುಮ್ಮನೆ ಟೀಕೆ ಮಾಡಿದರೆ ಏನು ಬಂತು ಭಾಗ್ಯ!" ಏನೋ ಗೆದ್ದವನಂತೆ ಮುಖ ಮಾಡಿಕೊಂಡು ಕುಳಿತ.

ನನಗೆ ಕುತೂಹಲವೂ ಆಶ್ಚರ್ಯವೂ ಆಯ್ತು. ಏನು ನೋಡುವ ಎಂದು ಫೈಲನ್ನು ತಿರುವಿಹಾಕಿದೆ. ಕಾಗದಗಳನ್ನು ತಾರೀಖುವಾರು, ನಂಬರುವಾರು ಜೋಡಿಸಿಟ್ಟಿದ್ದ.

ಕಿಟ್ಟಿ ವಿವರಿಸಿದ, "ಇದೆಲ್ಲಾ ಒಂದೇ ವಿಷಯಕ್ಕೆ ಸಂಬಂದಪಟ್ಟ ರಿಕಾರ್ಡು. ಇದರ ನಾಲ್ಕರಷ್ಟು ಗಾತ್ರದ ಫೈಲು ನಮ್ಮ ಜಿಲ್ಲಾಧಿಕಾರಿಗಳ ಆಫೀಸಿನಲ್ಲಿದೆ. ಅದೂ ಇದೇ ವಿಷಯಕ್ಕೆ ಸಂಬಂಧಪಟ್ಟದ್ದು. ಈಗ ಏನು ಹೇಳುತ್ತೀರ" ಎಂದ, ನಮ್ಮ ಮೇಲೆ ಬೀಳುವವನಂತೆ ಹಾರಾಡುತ್ತಾ!

ಕೂತುಕೊಂಡು ಫೈಲು ತಿರುವಿಹಾಕಿದೆ. ಆದರ ತಿರುಳು ನಿಮಗೂ ಸ್ವಲ್ಪ ತಿಳಿದಿರಲಿ ಅಂತ ಮುಖ್ಯವಾದ ನಾಲ್ಕೆರಡು ಉತ್ತರಗಳನ್ನು ಇಲ್ಲಿ ಕೊಡುತ್ತೇನೆ.

ಮುಖ್ಯ ಮಂತ್ರಿ ಕಛೇರಿ
೨೦–೧–೫೬

ಕೃಷ್ಣರಾಯರಿಗೆ,

ನೀವು ನಿಮ್ಮ ಜಿಲ್ಲಾಧಿಕಾರಿಗಳ ಮೇಲೆ ಬರೆದ ದೂರು ಮುಖ್ಯ ಮಂತ್ರಿಗಳಿಗೆ ಮುಟ್ಟಿದೆ. ಈ ವಿಚಾರದಲ್ಲಿ ನೀವು ಅಭಿವೃದ್ಧಿ ಶಾಖಾ ಕಾರ್ಯದರ್ಶಿಗಳಿಗೆ ಇನ್ನು ಮುಂದೆ ಪತ್ರವ್ಯವಹಾರ ನಡೆಸಬಹುದು.

....................
ಮುಖ್ಯಮಂತ್ರಿಗಳಿಗಾಗಿ.

* * *

ಅಭಿವೃದ್ಧಿ ಕಾರ್ಯದರ್ಶಿ ಕಛೇರಿ,
೧೬–೩–೧೯೫೬

ಕೃಷ್ಣರಾಯರಲ್ಲಿ,

ನಿಮ್ಮ ಕಾಗದ ತಲುಪಿತು. ಫೈಲನ್ನು ಮುಖ್ಯ ಕಾರ್ಯದರ್ಶಿಯವರಿಗೆ ಕಳಿಸಲಾಗಿದೆ. ನೀವು ಅವರಿಗೆ ಪತ್ರವ್ಯವಹಾರ ಮಾಡಬಹುದು.

........ಪರವಾಗಿ.

* * *

ಸೆಕ್ರೆಟೇರಿಯಟ್,
೨೬–೬–೫೬

ಕೃಷ್ಣರಾಯರಿಗೆ,

ನಿಮ್ಮ ಎರಡೂ ಕಾಗದ ತಲುಪಿತು. ಯಾವ ಕಾಗದ ಯಾರಿಗೆ ಬರೆಯಬೇಕೆಂಬುದೂ ತಿಳಿಯುವುದಿಲ್ಲವೇ ನಿಮಗೆ? ಇನ್ನು ಮುಂದೆ ನೀವು ರೆವಿನ್ಯೂ ಮಂತ್ರಿಗಳಿಗೆ ಬರೆಯಿರಿ.

....................
ಮುಖ್ಯ ಕಾರ್ಯದರ್ಶಿಗಾಗಿ

* * *

೨–೯–೫೬

ನಿಮ್ಮ ಕಾಗದ ಬಂದಿದೆ. ಈ ಮಧ್ಯೆ ನೀವೇ ಬಂದು ಮಂತ್ರಿಗಳನ್ನು ಭೇಟಿಮಾಡಿದ ವಿಚಾರವೂ ಮಂತ್ರಿಗಳ ಗಮನದಲ್ಲಿದೆ. ಫೈಲನ್ನು ಸಿ. ಸ. ಕಂಟ್ರೋಲರಿಗೆ ಕಳಿಸಿದೆ. ಅವರಿಗೆ ನೀವು ಕಾಗದ ಬರೆಯಬಹುದು.

... ................
ರೆವಿನ್ಯೂ ಮಂತ್ರಿಗಳಿಗಾಗಿ.

* * *

ಸಿ. ಸ. ಕಂಟ್ರೋಲರ್,

೧–೩–೪೨

ಕೃಷ್ಣರಾಯರೇ,

ನಿಮ್ಮ ಕಾಗದ ಬಂತು. ಇದುವರೆಗೂ ಫೈಲು ಸಿಕ್ಕಿರಲಿಲ್ಲ. ಈಗ ಸಿಕ್ಕಿದೆ. ಸಾಹೇಬರು ನೋಡುತ್ತಿದ್ದಾರೆ. ಅನಂತರ ತಿಳಿಸಲಾಗುತ್ತೆ.

........ಪರವಾಗಿ.

*   *   *

ಸಿ. ಸ. ಕಂಟ್ರೋಲರ್,

೧–೮–೪೭

ನಿಮ್ಮ ನಾಲ್ಕು ಕಾಗದಗಳೂ ತಲುಪಿದುವು. ನೀವು ರಿಜಿಸ್ಟರು ಮಾಡಿ ಆ ಕಾಗದ ಹಾಕಿದ್ದರಿಂದ ನಮಗೆ ತಲುಪಿವೆ ಎಂದು ನಿಮಗೆ ಖಚಿತವಾಗಿ ತಿಳಿದದ್ದರಿಂದ ಉತ್ತರ ತಕ್ಷಣ ಬರೆಯಲಿಲ್ಲ. ಈಗ ನಿಮ್ಮ ಫೈಲನ್ನು ಸಾಹೇಬರು ಪರಿಶೀಲಿಸಿ ನಿಮ್ಮ ಜಿಲ್ಲಾಧಿಕಾರಿಗಳಿಗೆ ಕಳಿಸಿದಾರೆ. ಇನ್ನು ಮುಂದೆ ನೀವು ಅವರ ಕೂಡ ಪತ್ರವ್ಯವಹಾರ ಮಾಡಬಹುದು.

........ಪರವಾಗಿ.

*   *   *

ಜಿಲ್ಲಾ ಕಛೇರಿ,

೧೩–೧೧–೧೯೪೭

ಕೃಷ್ಣರಾಯರಿಗೆ,

ನಮ್ಮ ಮೇಲೆ ನೀವು ಬರೆದ ಅರ್ಜಿ, ಅದಕ್ಕೆ ಸಂಬಂಧಪಟ್ಟ ಎಲ್ಲ ರಿಕಾರ್ಡು ಇಲ್ಲೇ ಇವೆ. ನಿಮ್ಮ ಕಾಗದವೂ ತಲುಪಿತು. ಹೀಗೆ ವಿನಾ ಕಾರಣ ನಮ್ಮ ಮೇಲೆ ಅರ್ಜಿ ಕೊಟ್ಟುದಕ್ಕಾಗಿ ನಿಮ್ಮ ಮೇಲೆ ಸೂಕ್ತ ಕ್ರಮವನ್ನು ಏಕೆ ತೆಗೆದುಕೊಳ್ಳಬಾರದೆಂಬುದಕ್ಕೆ ನೀವು ತಾ|| ೧೧-೩-೪೭ಕ್ಕೆ ಹಾಜರಾಗಿ ವಿವರಣೆ ಕೊಡಬೇಕು, ಇಲ್ಲದಿದ್ದರೆ ಮುಂದಿನ ಕ್ರಮ ಕೈಕೊಳ್ಳಲಾಗುವುದು. ತಿಳಿಯುವುದು.

ಜಿಲ್ಲಾಧಿಕಾರಿಗಳು.

*   *   *

"ನೋಡಿದೆಯಯ್ಯೋ" ಎಂದ ಚಟ್ಟಿ.

"ಅದಿರಲಿ. ಕೊನೆಗೆ ಅವರ ಆಫೀಸಿಗೆ ಹೋದೆಯೋ! ಏನಾಯ್ತು ಪೂಜೆ?" ಎಂದು ಕೇಳಿದೆ.

"ಹೋಗದೆ ಏನೋ ಭಯ? ಆದರೆ ಒಂದು ಟ್ರಿಕ್ ಮಾಡಿದೆ. ನಮ್ಮ ತಿಮ್ಮೇಗೌಡ ಇದಾನಲ್ಲ—ಅದೇ ಅವನು ಹೂಂ, ಅವನನ್ನ ಜೊತೆಯಲ್ಲಿ ಕರಕೊಂಡು ಹೋಗಿದ್ದೆ." ನನ್ನ ಮುಖ ಕಂಡಕೂಡಲೇ,

"ಅಯ್ಯೋ, ರ್‍ಯಾಸ್ಕಲ್. ನಿನಗೆ ತಕ್ಕದ್ದು ಮಾಡುತ್ತೇನೆ, ಎಂದೆಲ್ಲಾ ಹಾರಾಡುತ್ತಿದ್ದರು. ಅಷ್ಟರಲ್ಲೇ ಹಿಂದುಗಡೆ ಬಂದ ತಿಮ್ಮೇ ಗೌಡರನ್ನ ನೋಡಿ ಅರ್ಧ ಇಳಿದರು. "ಹೋಗಲಿ ಬಿಡಿ ಸಾರ್, ಬಡ ಮುಂಡೇದು, ಏನೋ ತಪ್ಪು ಮಾಡಿದಾನೆ, ವೃಥಾ ನಮ್ಮ ಸರ್ಕಾರಕ್ಕೆ ಇಷ್ಟು ಕಾಗದ ಖರ್ಚು ಮಾಡಿಸಿದಾನೆ" ಅಂತ ರೆಕಮಂಡ್ ಮಾಡಿದ. "ಈಸಾರಿಗೆ ಕ್ಷಮಿಸಿದ್ದೇನೆ ಹೋಗು" ಅಂತ ಕಳಿಸಿಬಿಟ್ಟರೂ ಅನ್ನು" ಎಂದು ಮುಖ ತಿರುಗಿಸಿಕೊಂಡ ನಮ್ಮ ಕಿಟ್ಟಿ!!

—ಹಾ. ರಾ.

— o —




ಈ ಬೋರ್ಡು ತೊಗೋತೀನ್ರಿ—ನಾಳೆ ತಿಂಗಳು ದುಡ್ಡು ಕಳಿಸುತ್ತೇನೆ.

# ಪಾಯಿಂಟ್ ಆಫ್ ಆರ್ಡರ್

ಈ ದಿನ ಅಪರಾಹ್ನ ಅಸೆಂಬ್ಲಿಯಲ್ಲಿ ಬಹು ಮುಖ್ಯವಾದ ಒಂದು ಕ್ರಮ ಬಿಂದು (Point of order) ವಿಷಯವಾಗಿ, ದೀರ್ಘಕಾಲ ಚರ್ಚೆ ನಡೆಯಿತು. ಪಾರ್ಲಿಮೆಂಟ್ ಪದ್ಧತಿ, ಭಾರತದ ಹೊಸರಾಜ್ಯಾಂಗ ರಚನೆಯನ್ನು ನೆರವೇರಿಸಿದವರ ಒಳಾಭಿಪ್ರಾಯ, ಅದರ ಅನುಬಂಧ ನಿಬಂಧನೆಗಳು, ಮಾಮೂಲು ಸಂಪ್ರದಾಯಗಳು, ಸಭಾ ಮರ್ಯಾದೆಯ ಕಟ್ಟು ಗುಟ್ಟುಗಳು, ಸದಸ್ಯರ ಹಕ್ಕುಗಳು, ಪ್ರಜಾ ಕೋಟಿಯ ಮೂಲಭೂತ ಸ್ವಾಮ್ಯಸ್ವಾತಂತ್ರ್ಯಗಳು—ಈ ಎಲ್ಲದರ ಮಹೋನ್ನತ ಮಹತ್ವ ಪೂರ್ಣ ತತ್ವಗಳೂ ಚರ್ಚೆಯಾದುವು.

ಮಾನ್ಯ ಸದಸ್ಯರೊಬ್ಬರು ಸಭೆ ನಡೆಯುತ್ತಿದ್ದಾಗ ಸಭಾ ಮಂದಿರ ಮಧ್ಯದಲ್ಲಿ ನಿದ್ದೆಮಾಡುತ್ತ, ಗೊರಕೆ ಹೊಡೆದದ್ದು, "ಸಭೆಯ ಕಾರ್ಯಕಲಾಪಗಳಿಗೆ ಅಡ್ಡಿ ಅಡಚಣೆಗಳನ್ನು ಒದಗಿಸುವ ಅಪರಾಧವೇಕ್ಷೆಅಲ್ಲವೆ?" ಎಂಬುದೇ ಕ್ರಮ ಬಿಂದು. ಅಧ್ಯಕ್ಷರು ಪ್ರಾರಂಭದಲ್ಲಿ, ತಾವು ಯಾವ ಅಭಿಪ್ರಾಯವನ್ನೂ ತಕ್ಷಣವೇ ಕೊಡಲು ಇಚ್ಛಿಸುವುದಿಲ್ಲವೆಂದೂ, ಸಭಿಕರು ತಮಗೆ ಅದರ ಸಾಧಕ ಬಾಧಕಗಳನ್ನು ಕೂಲಂಕಷವಾಗಿ ವಿಶದಪಡಿಸಬೇಕೆಂದೂ ವಿನಯಪೂರ್ವಕ ಕೋರಿದರು.

ಗೊರಕೆದಾರರು ಯಾವ ಅಪರಾಧವನ್ನೂ ಮಾಡಿಲ್ಲವೆಂದು ಅನೇಕರು ವಾದಿಸಿದರು. ಮನಃಪೂರ್ವಕವಾಗಿ ಅಡ್ಡಿ ಅಡಚಣೆಗಳನ್ನು ಅವರು ತಂದೊಡ್ಡಿಲ್ಲವೆಂದೂ, ಅವರ ಗೊರಕೆ ಕೇವಲ ಅನಿವಾರ್ಯವೆಂದೂ, ಅವರಿಗೆ ಅದರ ಪರಿವೆಯೇ ಇಲ್ಲವೆಂದೂ, ಅದು ಅವರ ದೇಹರಚನೆಯಿಂದಾಗಿರುವ ಶಬ್ದ ಸಂಪತ್ತೆಂದೂ, ಅವರ ಪರ ಕೆಲವರು ಹೇಳಿಕೆ ಇತ್ತರು. ಅವರ ಗೊರಕೆಗೆ ಅವರಿಗುಂಟಾದ ನಿದ್ದೆಯೇ ಕಾರಣವೆಂದೂ, ಆ ನಿದ್ದೆಗೆ (೧) ಅವರು ಪೂರ್ವಾಹ್ನ ಸರ್ಕಾರಿ ಖರ್ಚಿನಲ್ಲಿ ಮಾಡಿದ ಭೋಜನ ವಿಶೇಷ ಹಾಗೂ (೨) ಅನಂತರ ಅವರು ಸಭೆಗೆ ಬಂದಾಗ ಅಲ್ಲಿ ಸುಮಾರು ಒಂದೂವರೆ ತಾಸು ಕೇಳಬೇಕಾಗಿ ಬಂದ ಭಾಷಣಗಳು—ಇವೇ ಸಕಾರಣವೆಂದೂ, ಆದ್ದರಿಂದ ಗೊರಕೆದಾರರನ್ನು ಟೀಕಿಸಲು ಸರ್ಕಾರಕ್ಕಾಗಲಿ, ಸಭಿಕರಿಗಾಗಲಿ ಯಾವ ಅಧಿಕಾರವೂ ಇಲ್ಲವೆಂದು ವಾದಿಸಲಾಯಿತು. ಹಿಂದೆ ಅನೇಕ ಬಾರಿ, ಸಭಿಕರು ನಿದ್ದೆ ಮಾಡಿದಾಗ, ಈ ಕ್ರಮ ಬಿಂದುವನ್ನು ಯಾರೂ ಎತ್ತಲಿಲ್ಲವೆಂದೂ, ಅಥವಾ ಎಂದೋ ಎಲ್ಲೋ ಯಾರೋ ಎತ್ತಿದ್ದರೂ ಅದು ಬಿದ್ದುಹೋಗಿರಬೇಕೆಂದೂ, ಈಗ ಸದರಿ ಗೊರಕೆ

ದಾರರೂ ಕೂಡ ಕೇವಲ ನಿದ್ದೆಯೊಂದನ್ನೇ ಜರುಗಿಸುತ್ತಿರುವರೆಂದೂ, ಈ ಪರಿಯ ಗದ್ದಲದನಿದ್ದೆ, ಅವರ ಮಟ್ಟಿಗೆ ಮಾತ್ರ ಹೇಳುವುದಾದರೆ, "ಕಾನೂನು ಬದ್ಧವಾದ ನಿದ್ರೆ" ಮಾತ್ರವೆಂದೂ, ಗೊರಕೆದಾರರ ಗೆಳೆಯರು ಘೋಷಿಸಿದರು. ಇಷ್ಟೊಂದು ನೆಮ್ಮದಿಯಾಗಿ ಈ ಕ್ರಮ ಬಿಂದುವನ್ನು ಸಭಿಕರು ಚರ್ಚಿಸುತ್ತಿರುವುದೇ ಆತನ ಗೊರಕೆಯಿಂದ ಸಭೆಯ ಕಾರ್ಯಕಲಾಪಗಳಿಗಾಗಲಿ, ಅದರ ಘನತೆ ಗೌರವಗಳಿಗಾಗಲಿ ಕೊಂಚವೂ ಅಡ್ಡಿ ಆತಂಕಗಳುಂಟಾಗಿಲ್ಲ ಎಂಬುದಕ್ಕೆ ನಿದರ್ಶನ—ಎಂದು ಒಬ್ಬರು ಹೇಳಿದಾಗಂತೂ, ಸಭೆ ಕರತಾಡನದಿಂದ ಅವರ ವಾದ ಸರಣಿಯನ್ನು ಮೆಚ್ಚಿತು. "ವಾಕ್ ಔಟ್" ಮುಂತಾದ ತೀವ್ರ ನಿಷೇಧ ಕ್ರಮಗಳನ್ನು ಅನುಮತಿಸಿರುವ ಅಧ್ಯಕ್ಷರು ಒಳಗೆ ಕೂತು, ಸಮಾಧಿ ಸ್ಥಿತಿಯನ್ನನುಭವಿಸಿ ಓಂಕಾರೋಚ್ಚಾರಮಾಡುವ ಆ ಹದಿನಾರಾಣೆ ಭಾರತೀಯನನ್ನು ಏಕೆ ಪೀಡಿಸಬೇಕೋ ತಿಳಿಯದು, ಎಂದು ಒಬ್ಬರು ಉಪನ್ಯಾಸಮಾಡಿ ಮೂಗಿನ ಮೇಲೆ ಬೆರಳಿಟ್ಟು ಕುಳಿತರು. ಪ್ರತಿನಿಧಿಯಾಗಿ ಆರಿಸಿಬಂದ ಆ ಮಹನೀಯ, ಪ್ರತಿನಿಧಿ ಸಭೆಯಲ್ಲಿ ಪ್ರಜೆಗಳ ಸೇವೆಯನ್ನು ಈ ರೀತಿಯಾಗಿ ಮಾಡುವುದೇ ತಮ್ಮ ಆದ್ಯಕರ್ತವ್ಯ, ಅಷ್ಟೇ ತಮ್ಮ ಸಾಮರ್ಥ್ಯ, ಎಂದೆಣಿಸಿದ್ದರೆ, ನಾವು ಏಕೆ ಅವರಿಗೂ, ಅವರನ್ನು ಆರಿಸಿ ಕಳುಹಿಸಿದ ಘನವಾದ ವೋಟುದಾರರಿಗೂ ಅಪಮಾನ ಪಡಿಸಬೇಕೆಂದು ಹಿರಿಯರೊಬ್ಬರು ಹೇಳಿದರು.

ಆದರೆ, ಕ್ರಮಬಿಂದುವನ್ನು ಪುಷ್ಟೀಕರಿಸುತ್ತ, ಗೊರಕೆದಾರರನ್ನು ಖಂಡಿಸಿ ಕೂಡಲೇ ಅವರ ಸದ್ದಡಗಿಸಲೇಬೇಕೆಂದೂ, ಅದಕ್ಕಾಗಿ ಅವರನ್ನು ಹೇಗಾದರೂ ಮಾಡಿ ಎಚ್ಚರಗೊಳಿಸಲೇ ಬೇಕೆಂದೂ, ಕೆಲವರು ಅಧ್ಯಕ್ಷರಿಗೆ ಸಲಹೆ ಇತ್ತರು. ತಮಗೆ ಗೊರಕೆ ಉಪದ್ರವವಿದ್ದರೂ, ಅವರು ಚುನಾವಣೆಗೆ ನಿಂತದ್ದು ಮಹಾಜನಗಳಿಗೆ ಆ ವಿಷಯವನ್ನು ಹೇಳದೆ ಮರೆಮಾಚಿದ್ದು, ಅವರ ವೋಟುಗಳಿಸಿದ್ದು ಇವೆಲ್ಲ ತಪ್ಪು ಎಂದು ಅವರು ಎತ್ತಿ ಆಡಿದರು. ಮೂಲಭೂತ ಹಕ್ಕುಗಳನ್ನು ಸಾರ್ವಜನಿಕ ಕ್ಷೇತ್ರಗಳಲ್ಲಿ ಇತರರ ಮೂಲಭೂತಗಳೆದುರು ತಂದೊಡ್ಡುವುದು ಕಾನೂನಿಗೆ ವಿರೋಧವೆಂದೂ ಒಬ್ಬಿಬ್ಬರು ವಾದಿಸಿದರು. ಇಂಥ ಶಬ್ದ ಸಂಪತ್ತನ್ನೂ, ರಾಗಾಲಾಪನ ಚತುರತೆಯನ್ನೂ ಸರ್ಕಸ್ಸುಗಳಲ್ಲಾಗಲಿ, ವಾಕ್ಚಿತ್ರಗಳಲ್ಲಾಗಲಿ ಉಪಯೋಗಿಸಿ ದೇಶಕ್ಕೆ ನೀಡಬೇಕೇ ವಿನಹ ಪ್ರತಿನಿಧಿ ಸಭೆಗೆ ನುಗ್ಗಬಾರದೆಂದು ಸದಸ್ಯರೊಬ್ಬರು ಹೇಳಿದಾಗ, ಅಧ್ಯಕ್ಷರು ಅವರ ಆ ವಾದ ತೀರ ಅಪ್ರಕೃತವೆಂದು ಅದನ್ನು ತಳ್ಳಿ ಹಾಕಿದರು. ಸರ್ಕಾರಿ ಖರ್ಚಿನಲ್ಲಿ ಭೋಜನ ಮಾಡಿದ್ದರಿಂದ ನಿದ್ದೆ ಬಂತು, ಎಂಬುದರಲ್ಲಿ ನಿಜಾಂಶವಿರಬಹುದಾದರೂ, ಇತರರ ನಿದ್ದೆಗೆ ಆತ ಭಂಗ ತರಬಾರದಾಗಿತ್ತೆಂದು ಒಬ್ಬರು ಖಂಡಿಸಿದರು. ಬೇಸರಿಕೆಯನ್ನೂ, ನಿದ್ದೆಯನ್ನೂ ತತ್ಪರಿಣಾಮವಾಗಿ ಗೊರಕೆಯನ್ನೂ

ಅತಿ ಶೀಘ್ರದಲ್ಲಿ ಉಂಟುಮಾಡಬಹುದಾದ ಭಾಷಣಗಳೇ ಈ ಪರಿಸ್ಥಿತಿಗೆ ಕಾರಣ ವೆಂಬ ವಾದಕ್ಕೆ ಉತ್ತರ ಹೇಳುತ್ತ, ಅಂಥ ಭಾಷಣಗಳು ಎಲ್ಲ ಪ್ರತಿನಿಧಿ ಸಭೆ ಗಳಲ್ಲೂ ಸಹಜ ಸುಲಭವಾಗಿರುವಾಗ, ಅದನ್ನರಿತೇ ಆತ ಚುನಾವಣೆಗೆ ನಿಂತಿರ ಬೇಕೆಂದೂ ಆದ್ದರಿಂದ ಆ ನೆಪ ಹೇಳಿ ಈಗ ಈ ರೀತಿ ಗದ್ದಲವೆಬ್ಬಿಸುವುದು ಸರಿಯಲ್ಲವೆಂದೂ ಆತನ ವರ್ತನೆಯಿಂದ ಸಭೆಯ ಅಮೂಲ್ಯ ಕಾಲ ವ್ಯರ್ಥ ವಾಗುತ್ತಿದೆ ಎಂಬುದಕ್ಕೆ ಈ ಚರ್ಚೆಯೇ ನಿದರ್ಶನವೆಂದೂ ನುರಿತ ದೇಶ ಸೇವಕ ರೊಬ್ಬರು ಹೇಳಿದರು.

ಕಡೆಗೆ, ಅಧ್ಯಕ್ಷರು ಸಭಿಕರನ್ನು ವಂದಿಸಿ, ಇತರೇ ಪ್ರಜಾ ಪ್ರಭುತ್ವ ದೇಶ ಗಳ ಪಾರ್ಲಿಮೆಂಟುಗಳ ಅಧ್ಯಕ್ಷರೊಡನೆ ತಾವು ಪತ್ರವ್ಯವಹಾರ ನಡೆಯಿಸಿ, ಒಂದು ಇತ್ಯರ್ಥಕ್ಕೆ ಒಂದು ಸಭೆಗೆ ತಮ್ಮ ತೀರ್ಪನ್ನು ಕೊಡುವುದಾಗಿಯೂ, ಅದುವರೆಗೂ, ಗೊರಕೆದಾರರನ್ನು ಯಾರೊಬ್ಬ ಸದಸ್ಯರೂ ಆತನು ಅನುಭವಿಸು ತ್ತಿರುವ ಸುಖನಿದ್ರೆಯಿಂದ ಎಬ್ಬಿಸಕೂಡದೆಂದೂ ಹೇಳಿ ಮುಕ್ತಾಯಗೊಳಿಸಿದರು.

—— (o) ——




ಚರ್ಖಾ ಸ್ಪರ್ಧೆಯ ತೀರ್ಪುಗಾರ್ತಿಯ ಆಗಮನ

# ಕೈ ತೋರಿಸಿ......

ಅಂಗಿ ಮೇಲೆ ಅಂಗಿ, ಚಿಂದಿ ಮೇಲೆ ಚಿಂದಿ ಹಾಕಿಕೊಂಡು, ಬೆಳಗ್ಗೆ ಜಯವಾಗಲಿ! ಜಯವಾಗ್ಲಿ! ಅಂತ ಡುಬುಡುಬುಗುಟ್ಟಿಸುತ್ತ ಬುಡುಬುಡಿಕೆಯವನು ಮನೆ ಬಾಗಿಲಲ್ಲಿ ಸಿದ್ಧ.




ಹಿಂದಿನ ದಿವಸ ಕಛೇರೀಲಿ ಜರೂರಾಗಿ ಮಂತ್ರಿಗಳಿಗೆ ಹೋಗಬೇಕಾದ ಫೈಲನ್ನು ಕೈತಪ್ಪಿ ಲೆಕ್ಕದ ತನಿಖೆ ಕಛೇರಿಗೆ ಕಳಿಸಿದ್ದೆ. ಮಂತ್ರಿಗಳಿಗೆ ಸ್ವತಃ ಅಹವಾಲು ಮಾಡಿಕೊಂಡಿದ್ದವನ ಫೈಲು ಅದು. ಅದೇ ಹೋಬಳಿಯ ಅದೇ ಕೇರಿಯ, ಅದೇ ಬೀದಿಯ, ಅದೇ ಟೋಪಿಯ, ಅದೇ ಜೈಲು ವಾಸ ಮಾಡಿದ ಮಿತ್ರ ಹಾಗೂ ಸೋದರಳಿಯನ ಫೈಲು ಅದು. ಮಂತ್ರಿಗಳು ಮೊದಲು ನೋಡಿ ಅಸ್ತು ಅಂದರೆ, ಲೆಕ್ಕದ ತನಿಖೆಯವರು ಸುಸ್ತು. ಆದರೂ ಇನ್ನು ಮುಂದೆ ಹೀಗಾಗ ಬಾರದು. ನಮಗೆ ಮೊದಲು ಬರಬೇಕು, ನಾವು ಅಸ್ತು ಅಂದರೆ ನಂತರ ಮಂತ್ರಿಗಳ ಮಟ್ಟಕ್ಕೆ ಹೋಗಬೇಕು ಎಂದು ಷರಾ ಸೂಚಿಸುತ್ತಾರೆ. ಬೀರಿದ ಫೈಲು ಸಾರ್ಥಕವಾದರೆ—ನೂರು ವರ್ಷ ಆಯುಸ್ಸು! ಅಲ್ಲವೇ? ಅಂತಹಾ ಫೈಲನ್ನು ಮರೆತು ನಾನು ಲೆಕ್ಕದ ತನಿಖೆಯವರಿಗೇ ಕಳಿಸಿಬಿಟ್ಟಿದ್ದೆ—ಮುನ್ನೆಚ್ಚರಿಕೆಗಳೇನೋ ಸಾಕಷ್ಟು ಬಂದಿತು—ಮರೆತು ಈ ತಪ್ಪು ಮಾಡಿದ್ದೆ.

ಹಿಂದಿನ ಸಾಯಂಕಾಲವೆಲ್ಲಾ ನನಗೆ ಯೋಚನೆ—ಕೊಪ್ಪಕ್ಕೆ ವರ್ಗ ಮಾಡುತ್ತಾರೆಯೋ? ಅಥವಾ ಲೆಕ್ಕದ ತನಿಖೆ ಕಛೇರಿಗೆ ಹೋಗಿ ಅಲ್ಲಿನವರನ್ನು ಪುಸಲಾಯಿಸಿ ಆ ಫೈಲು ಹಿಂದಕ್ಕೆ ತೆಗೆದುಕೊಂಡು ಬಾ ಎಂದು ಹೇಳುತ್ತಾ

ರೆಯೇ? ಹಾಗೇನಾದರೂ ಹೇಳಿದರೆ, ಆ ಅಡ-ಅಡ-ಅನ್ನುವರ ಹತ್ತಿರ ನಾನು ಫೈಲನ್ನು ಹಿಂದಕ್ಕೆ ತರಲು ಸಾಧ್ಯವೇ? ಹಾಗೂ ಡಿಸ್‌ಮಿಸ್ಸೇ ಮಾಡಿಬಿಡುವರೋ? ಇಲ್ಲಾ ಕೋರ್ಟಿಗೆ ಎಳೆದರೆ ಗತಿ ಏನು? ಇದೇ ಯೋಚನೆಯಲ್ಲಿ ರಾತ್ರಿ ಮಲಗಿದ್ದೆ. ರಾತ್ರಿಯೆಲ್ಲಾ ಕೆಟ್ಟ ಕೆಟ್ಟ ಕನಸು. ರಸ್ತೆಯಲ್ಲಿ ಹೋದಾಗ ಒಂದು....ಟೋಪಿ ನನ್ನನ್ನೇ ಅಟ್ಟಿಸಿಕೊಂಡು ಬಂದು ನನ್ನನ್ನು ಪೂರ್ಣ ಆವರಿಸಿ ಉಸಿರಾಡದಂತೆ ಮುಚ್ಚಿದಂತಾಯ್ತು. ಹೊರಳಿದೆ ಅಂತ ಕಾಣುತ್ತೆ. ನರಕ ದರ್ಶನ. ಫೈಲೆಲ್ಲಿ! ಫೈಲೆಲ್ಲಿ! ಎಂತ ಯಮದೂತರೆಲ್ಲಾ ಭರ್ಜಿ ಹಿಡಿದು ನನ್ನನ್ನೇ ಅಟ್ಟಿಸಿಕೊಂಡು ಬರುತ್ತಿತ್ತು. ಸಿನಿಮಾದಲ್ಲಿ ಆದ ಹಾಗೆ ಬೇರೆ




ದೃಶ್ಯ. ಅಂಕಿಗಳೆಲ್ಲವೂ ೧-೯ರವರೆಗೆ ವಿಧ ವಿಧ ಮಾದರಿಯಲ್ಲಿ ಸಮವಸ್ತ್ರ ಧರಿಸಿ, ಕವಾತು ಮಾಡುತ್ತಾ, ಭಲೇ! ಭೇಷ್! ಭಲೇ ಭೇಷ್!! ಅಂತ ಜೀರಾಡಿದಂತೆ---ಇಂತಹ ದುಸ್ಸ್ವಪ್ನಗಳನ್ನು ಕಂಡು ಅರ್ಧಂಬರ್ಧ ನಿದ್ರೆಮಾಡಿ —ಇದು ನ್ಯಾಯವೇ ಅಲ್ಲವೇ! ಈ ಕಾಲದ ಅರ್ಧಂಭರ್ಧ ಹೊಟ್ಟೆಯ ನೌಕರರಿಗೆ—ಆಗಲೇ ಜಯವಾಗಲಿ! ಜಯವಾಗಲಿ!! ಎಂಬ ಉದಯರಾಗ ಕೇಳಿಸಿದ್ದು. ನಾನೂ ಹೊರಗೆ ಅಕ್ಕಿ ಹಿಡಿ ಹಿಡಿದುಕೊಂಡು ಹೊರಗೆ ಹೋಗಿ ಬುಡುಬುಡಿಕೆಯವನನ್ನು ನೋಡಿದ್ದು.

ಆಗಲೇ ನನ್ನ ಮನಸ್ಸಿಗೆ ಹೊಳೆದಿದ್ದು. ಸಂಕಟ ಬಂದ ನನಗೆ ಇವನೇ ವೆಂಕಟರಮಣಾ! ನನ್ನ ಭವಿಷ್ಯವನ್ನು ಈತನೇ ಹೇಳಬಹುದು. ನನ್ನ ಮನಸ್ಸಿಗೆ ಶಾಂತಿ ತರುವ ದೇವ ರೂಪಿಯೇ ಈತ ಅಂತ, ಹಿಡಿ ಅಕ್ಕಿ ಆವನ ಜೋಳಿಗೆಗೆ ಹಾಕಿದೆ. ಆ ಜೋಳಿಗೆಯಲ್ಲಿ ಏನಿತ್ತು ಗೊತ್ತೆ? ಒಂದು ರೂಪಾಯಿ ನೋಟು! ಒಂದು ಚೆಕ್ಕು, ಒಂದು ಪ್ರೊನೋಟು. ಒಂದು ಕಾಳು ತಿನ್ನುವ ವಸ್ತು ಇತ್ತಿಲ್ಲ! ಕಾಳು ಹಾಗಿರಲಿ! ಹೊಟ್ಟು ಕೂಡ ಇತ್ತಿಲ್ಲ. ನಾನು ಒಂದು ಹಿಡಿ ಆಕ್ಕಿ ಅದರಲ್ಲಿ ಹಾಕಿದಾಗ, ಚೆಕ್ಕು ಕೂಡ ಬಾಯ್ಬಿಟ್ಟು ನೋಡಿತು. ನೋಟು ಕೂಡ ಸುರುಳಿ ಸುತ್ತಿಕೊಂಡಿತು. ಅವನನ್ನು ನೋಡಿದೆ—ಬಾಯಿನ ಅಂಚು ಎಲ್ಲಿತ್ತು ಗೊತ್ತೆ? ಕಿವಿಯ ಹತ್ತಿರ!! ಅವನು ಧರಿಸಿದ್ದ ತಿಲಕ ಏನಾಗಿತ್ತು ಗೊತ್ತೆ! ಅಲೆಯಲಿ! ಕೋರೆ ರುಮಾಲು ನಗುನಗುತ್ತಿತ್ತು. ಗಂಟಲ ಗೋಮಾಳೆ ಗಂಟಲಿಗೇ ಏರಿ, ಅವನಿಗೆ ಉಸಿರು ಸಿಕ್ಕಿಕೊಂಡಂತೆ ಭಾಸವಾಗುತ್ತಿತ್ತು. ಕಣ್ಣು ನೀರು, ಅಲ್ಲಾ! ಆನಂದ ಬಾಷ್ಪ ಕೋಡೀಹರಿಸುತ್ತಿತ್ತು.

ಮೂರು ನಿಮಿಷ ಎಲ್ಲಾ ನಿಶ್ಶಬ್ದ. ಎಲ್ಲಾ ಜಡ! ಸೂರ್ಯ ಚಂದ್ರರು ಸ್ತಬ್ಧ!! ಐನ್ಸ್ಟೀನರು ನಿಟ್ಟುಸಿರು!! ಸ್ವಿಟ್ಸರ್‌ಲೆಂಡಿನ ಕೀಲಿಯಿಲ್ಲದ ಗಡಿಯಾರಗಳೂ ಸ್ತಬ್ಧ!! ಸ್ಮಶಾನ ರುದ್ರನ ಭೈರವ ನಾಟ್ಯವೂ ಟಾಪ್ಪೋ! ಆಗಿತ್ತು.

ನಂತರ ಅವ ಅಂದ. "ಧಣಿಯರೇ! ನಾಲ್ಕು ವಾರಗಳಿಂದ ನಾಲ್ಕು ಕೇರಿ ಸುತ್ತಿದೆ. ಅಲ್ಲಸಲ್ಲದ ಭವಿಷ್ಯ ಕೈ ನೋಡದೆಯೇ ಹೇಳಿದೆ. ಟೋಪಿ ನೋಡಿ ಭವಿಷ್ಯ ಹೇಳಿದೆ. ಯಾರು ಯಾರಿಗೆ ಏನು ಬೇಕಾಗಿತ್ತೋ ಅದೆಲ್ಲವನ್ನೂ ಹೇಳಿದೆ. ಎಲ್ಲರೂ ಸಂತೋಷಪಟ್ಟುಕೊಂಡರು. ಎಲ್ಲರೂ ಶಕ್ತಿಮೀರಿ ಹಣ ಕೊಟ್ಟರು. ಆದರೆ, ರಾಯರೆ! ಯಾರೊಬ್ಬರೂ ಒಂದು ಹಿಡಿ ರಾಗಿ ಕೊಡಲಿಲ್ಲ! ಒಂದು ಚಟಾಕು ಗೋಧಿ ಕೊಡಲಿಲ್ಲ!! ಒಂದು ಚಮಚಾ ಅಕ್ಕಿ ಕೊಡಲಿಲ್ಲ!!! ಇಂತಹ ಕಾಲದಲ್ಲಿ, ಇಂತಹ ಯುಗದಲ್ಲಿ, ನೀವು ನವೀನ ಕರ್ಣನಂತೆ ಬೊಗಸೆ ತುಂಬಾ ಅಕ್ಕಿ ಧರ್ಮ ಮಾಡಿದ್ದೀರಿ. ನಿಮ್ಮ ಕೈನೋಡಿ, ನಮ್ಮ ಗುರುಗಳು ಹೇಳಿಕೊಟ್ಟ ವಿದ್ಯೆಯನ್ನು ಚಾಚೂ ತಪ್ಪದೆ ಅನುಸರಿಸಿ ಭವಿಷ್ಯ ಹೇಳುತ್ತೇನೆ ಎಂದು ನನ್ನ ಕೈಹಿಡಿದ.

ನನಗೂ ಅದೇ ಬೇಕಾಗಿತ್ತು. ನನ್ನ ಹಿಂದಿನ ದಿನದ ತಪ್ಪು, ರಾತ್ರಿ ಕನಸಿನ ಸಮಸ್ಯೆಗೆ ಇವನೇ ಉತ್ತರ ಹೇಳುತ್ತಾನೆ ಎಂದು ಧೈರ್ಯ ಬಂದು ಅಲ್ಲೇ ಕುಳಿತೆ.

ಅವನೂ ನನ್ನ ಪಾಣಿಯುಗ್ರಹಣ ಮಾಡಿದ. ಹಸ್ತದ ರೇಖೆಗಳನ್ನು ತನ್ನ ಚಾಣಾಕ್ಷಗಳಿಂದ ವ್ಯಾಸಂಗ ಮಾಡತೊಡಗಿದ.

"ರಾಯರೇ" ಅಂದ. ನಿಮ್ಮ ಧನರೇಖೆ ಬಲು ಚೆನ್ನಾಗಿದೆ. ಆದರೆ, ಅರ್ಧದಲ್ಲಿಯೇ ತುಂಡು ಬಿದ್ದಿದೆ.

ಅನ್ನುತ್ತಿದ್ದಾಗಲೇ ಛಾವಣಿಯಿಂದ ಒಂದು ಹಲ್ಲಿ "ಕೃಷ್ಣ ಕೃಷ್ಣಾ! ಎಂದು ನನ್ನ ಅಂಗೈ ಮೇಲೆ ಬಿತ್ತು. ಸತ್ತುಬಿದ್ದಿತು. ಅದು ಲೊಚಗುಟ್ಟಿದ್ದು ಏಕೆ? ಬಿದ್ದ ಕೂಡಲೇ ಸತ್ತಿದ್ದು ಏಕೆ? ಅಥವಾ ಸತ್ತೇ ಬಿತ್ತೇ? ನನ್ನ ಹಸ್ತಗುಣದಿಂದ ಸತ್ತಿತೇ? ಅವನನ್ನು ನೋಡಿ ಸತ್ತಿತೇ! ಎಂದು ಯೋಚನೆಗಳು ವಿದ್ಯುತ್ ವೇಗದಿಂದ ಬರುವ ಮುಂಚೆಯೇ ಆತ ನನ್ನ ಕೈಬಿಟ್ಟ.

"ರಾಯರೇ! ಅಂದ. ಶಕುನ ಚೆನ್ನಾಗಲಿಲ್ಲ! ನಿಮ್ಮ ಭವಿಷ್ಯ ಹೇಳಬಾರದು ಅಂತ ಶಕುನ ನುಡಿದೈತಿ" ಎಂದು ಹೇಳಿ, ಹಿಂತಿರುಗಿ ನೋಡದೆ ಹೊರಟೇ ಹೋದ.

ಹಿಂದಿನ ದಿವಸದ ಶನಿ ಇನ್ನೂ ಕಾಡುತ್ತಲೇ ಇದ್ದಾನೆ ಎಂದು ಆಗಲೇ ನನಗೆ ಖಂಡಿತವಾಯ್ತು.

* * *

ಮೂರನೆಯ ದಿನ ಕಛೇರಿಗೆ ಹೋದೆ. ಆ ಫೈಲಿನ ಸುದ್ದಿಯೇ ಇಲ್ಲ. ಹಿರಿಯರು ಕರೆದು ಕಳಿಸಿ ಮುಖಕ್ಕೆ ಸೊಪ್ಪು ಹಾಕಲೇ ಇಲ್ಲ. ಅಲ್ಲಿ ಇಲ್ಲಿ ವಿಚಾರಿಸಿದಾಗ ಗೊತ್ತಾಯ್ತು, ನನ್ನ ಅಚಾತುರ್ಯದಿಂದ ಹೆಚ್ಚೇನೂ ಹಾನಿ ಆಗಿರಲಿಲ್ಲ. ಲೆಕ್ಕದ ತನಿಖೆ ಕಛೇರಿಯಲ್ಲಿ ಕೂಡ ಆ ಫೈಲಿಗೆ ಸಂಬಂಧಪಟ್ಟವನಿಗೆ ಬೇಕಾದ ಹಿರಿಯರು ಇದ್ದರು. ಎಲ್ಲವೂ ಸುಗಮವಾಗಿತ್ತು. ಸಧ್ಯ ಬದುಕಿದೇ ಅಂದುಕೊಂಡೆ.

ಆದರೆ ಈ ಬುಡುಬುಡಿಕೆಯವನು ಅಪಶಕುನ ಅಂದಿದ್ದೇಕೆ? ಧನ ರೇಖೆ ಚೆನ್ನ ಎಂದಿದ್ದೇಕೆ? ಮಧ್ಯೆ ತುಂಡು ಬಿದ್ದಿದೆ ಎಂದಿದ್ದೇಕೆ?—ಇದು ಸ್ವಲ್ಪ ಮಟ್ಟಿಗೆ ಮನಸ್ಸನ್ನು ಕೊರೆಯುತ್ತಿತ್ತು.

ನಾಲ್ಕು ದಿವಸಗಳಾಗಿತ್ತು. ಗುರುವಾರ ಬೆಳಗ್ಗೆ ತಿರುಗಿ ಬುಡುಬುಡಿಕೆಯವನು ಹಾಜರು. "ಏನಯ್ಯಾ! ಇವತ್ತು ಶಕುನ ಚೆನ್ನಾಗಿದೆಯೇ? ಇವತ್ತು ಬಂದೆಯಲ್ಲಾ?" ಎಂದೆ.

"ಸ್ವಾಮಿ! ನೀವು ಕೊಟ್ಟ ಹಿಡಿ ಅಕ್ಕಿ ಅಕ್ಷಯವಾಯಿತು. ಅವತ್ತು ನನ್ನ ದೆಸೆ ತಿರುಗಿತು. ಈ ನಾಲ್ಕು ದಿನದಲ್ಲಿ ನನಗೆ ಇಪ್ಪತ್ತು ರೂಪಾಯಿ ಸಂಪಾದನೆಯೂ ಆಯಿತು. ಅಂದೇ ನಾನು ಮನಸ್ಸಿನಲ್ಲಿ ಮಾಡಿಕೊಂಡೆ. "ನಾಲ್ಕು ದಿವಸ ಸಂಪಾದಿಸಿದ್ದನ್ನು ನಿಮಗೆ ನನ್ನ ಭಾಗ್ಯ ತಿರುಗಿಸಿದವರಿಗೆ ಗುರುದಕ್ಷಿಣೆಯಾಗಿ ಕೊಟ್ಟು—ಬ್ರಾಹ್ಮಣರ ಆಶೀರ್ವಾದ ಪಡೆದು ಕೃತಾರ್ಥನಾಗೋಣ" ಎಂದು.

ಅದಕ್ಕೇ ಇವತ್ತು ಬಂದೆ. ಈ ಹಣ ನೀವು ದಯಮಾಡಿಟ್ಟು ಗುರುದಕ್ಷಿಣೆಯಾಗಿ ತೆಗೆದುಕೊಳ್ಳಬೇಕು ಎಂದ.

ಎಲ್ಲಾದರೂ ಕೇಳಿದ್ದಿರಾ ಈ ವಿಚಿತ್ರಾನ. ಭಿಕ್ಷಕ್ಕೆ ಬಂದೋನು ನಮಗೇ ಭಿಕ್ಷ ಕೊಡೋದು? ಇದರಲ್ಲೇನೋ ಒಳಸಂಚು ಇದೆ. ಎಂದುಕೊಂಡೆ. ಊಹ್ಞು ಎಂದೆ.

"ಹೋಗಲಿ ಬಿಡಿ ಸ್ವಾಮಿ. ಒಂದು ಕೆಲಸ ಮಾಡೋಣ. ಹತ್ತು ರೂಪಾಯಿಗೆ ನೀವು ಒಂದು ಗೋವಾ ಲಾಟರಿ ಟಿಕೆಟ್ ತೆಗೆದುಕೊಳ್ಳಿ. ಅದನ್ನು ಇಪ್ಪತ್ತು ರೂಪಾಯಿಗೆ ನನಗೆ ಮಾರಿ. ನಾನೇನೂ ಕೊಟ್ಟ ಹಾಗಾಗಲಿಲ್ಲ. ನೀವು ಧರ್ಮ ತೆಗೆದುಕೊಂಡ ಹಾಗಾಗಲಿಲ್ಲ. ಬರೀ ವ್ಯಾಪಾರ ಮಾಡಿದಂತೆ" ಎಂದೆ.

ಹತ್ತು ರೂಪಾಯಿ ಸೊಸೈಟಿ ಸಾಲ. ಯುಗಾದಿ ಹಬ್ಬ. ಎಲ್ಲಕ್ಕೂ ಅನುಕೂಲ. ಹ್ಞೂ ಎಂದೆ.

ಅವನು ಗೋವಾ ಲಾಟರಿ ಟಿಕೇಟನ್ನೂ ಇಟ್ಟುಕೊಂಡಿದ್ದ. ನನಗೆ ಮಾರಿದ. ನಾನು ಅದನ್ನು ಕೊಂಡು, ಅವನಿಗೇ ಇಪ್ಪತ್ತಕ್ಕೆ ಮಾರಿದೆ.

ಎಲ್ಲಾ ಕನಸಿನಲ್ಲಿ ಆದಹಾಗೆ ಆಗಿಹೋಯ್ತು ನೋಡಿ! ಅದಕ್ಕೇ ಅಲ್ಲವೇ ಗಾದೆ! "ಕಟ್ಟು ಕಥೆಗಿಂತ ನಡೆದುದೇ ಸೋಜಿಗ" ಅಂತ.

ಹದಿನೈದು ದಿನಗಳು ಇದನ್ನೇ ಯೋಚಿಸುತ್ತಿದ್ದೆ. ಎಲಾ! ಯಾಕೆ ಇವ ಹೀಗೆ ಮಾಡಿದ? ಸುಮ್ಮ ಸುಮ್ಮನೆ ದಶ ರೂಪಾಯಿ ನನ್ನ ಕೈಗೆ ಏಕೆ ಹಾಕಿದ? ಅಷ್ಟು ಹೊತ್ತಿಗೆ "ಬಡ್ಜೆಟ್" ಸುದ್ದಿ, ಬಂಗಾಳಾ ಸುದ್ದಿ, ಅದಕ್ಕೂ ಮಿಗಿಲಾದ ನಮ್ಮ ಅತ್ತೆಯ ಆಗಮನ ನಮ್ಮ ಕುಚೇಲ ಕುಟೀರಕ್ಕೆ. ಅತ್ತೆ, ಮಗಳು ಒಂದು ಸೂರಿನ ಕೆಳಗೆ ಸೇರಿದರೆ, ಅಳಿಯನ ಪಾಡು ಗೊತ್ತೇ ಇದೆಯಲ್ಲ. ನಾಯಿ ಪಾಡು. ನಾನೂ ಕೂಡ ಮೂಲೆಯಲ್ಲಿ ಬೌ ಬೌ ಎಂದು ಬೊಗಳುತ್ತಾ ತಂಗಳು ರೊಟ್ಟಿ ತಿಂದು ನೀರು ಕುಡಿದು ಬಿದ್ದೆ. ಈಗಲಾಟೆಯಲ್ಲಿ ಮಿಕ್ಕಿದ್ದೆಲ್ಲಾ ಮರೆತೆ.

* * *

ಮೂರು ತಿಂಗಳಾಯ್ತು. ಒಂದು ಗುರುವಾರ, ಪೌರಸಭಾ ಮಂದಿರದ ಮುಂದೆ ಸಿಂಬಿ ಸುತ್ತಿಕೊಂಡು ಮನೆಗೆ ಹೋಗುತ್ತಿದ್ದೆ ಸಾಯಂಕಾಲ. ಜನರ ಗದ್ದಲವೋ ಗದ್ದಲ. ಏನಪ್ಪಾ ಎಂದು ನೋಡಿದರೆ, ಯಾರೋ ಮಹನೀಯ ಒಂದು ಲಕ್ಷ ರೂಪಾಯಿಗಳನ್ನು ಭಿಕ್ಷುಕರ ವಸತಿಗಾಗಿ ಧರ್ಮ ಮಾಡಿದ್ದನಂತೆ. ಅವನಿಗೆ ಸತ್ಕಾರ ಕೂಟ. ಆ ವಸತಿಯಲ್ಲಾದರೂ ಸ್ಥಳ ಸಿಗಬಹುದು, ಹೊಟ್ಟೆ ಹೊರೆಯಬಹುದು ಎಂದು ಊರಿನ ಜನರೆಲ್ಲಾ ಕಿಕ್ಕಿರಿದಿದ್ದರು. ಆ ವೇಳೆಗೆ ಮಾನ್ಯ ಅತಿಥಿಯ ಆಗಮನ.

ಯಾರೂ ಅಂತೀರಿ! ನೀವು ಊಹಿಸಿದಂತೆಯೇ! ಅವನೇ!!

ಸರಿ! ಮುಂದಿನ ಕತೆ ಗೊತ್ತಲ್ಲಾ! ನನ್ನ ಧನರೇಖೆ ನೋಡಿ ಬುಡು ಬುಡಿಕೆಯವ ನನ್ನ ಹೆಸರಲ್ಲಿ ಲಾಟರಿ ಟಿಕೇಟ್ ಕೊಂಡ. ಅದೇ ಧನರೇಖೆಗೆ ಅವನೇ ತುಂಡು. ಎಲ್ಲವನ್ನೂ ಗಿಟ್ಟಿಸಿದ. ತನ್ನ ಸಹಧರ್ಮಿಗಳಿಗೆ, ಸಹ ಕರ್ಮಿಗಳಿಗಾಗಿ ಒಂದು ಲಕ್ಷ ದತ್ತಿಕೊಟ್ಟ. ನಂತರ ಅವನನ್ನು ಜನರ ಪ್ರತಿ ನಿಧಿ ಅಂದರು. ಎಲ್ಲಿ ಅಂತೀರಿ? ಸಮಿತಿಗಳಲ್ಲಿ, ಪ್ರತಿನಿಧಿ ಸಂಸ್ಥೆಗಳಲ್ಲಿ—ವಿಶ್ವವಿದ್ಯಾ ಸಂಸ್ಥೆಗಳಲ್ಲಿ ಇತ್ಯಾದಿಗಳಲ್ಲಿ.

—ಅಲ್ಲಾ! ನನ್ನ ಹಣೇಬರಹ ನೋಡಿದಿರಾ! ನಾನೇ ಆ ಟಿಕೆಟ್ ಉಳಿಸಿ ಕೊಂಡಿದ್ದರೆ, ಅವನಿಗೆ ಕೈತೋರಿಸಿ ಅವಲಕ್ಷಣ ಮಾಡಿಸಿಕೊಂಡೆನಲ್ಲಾ ಎಂಥಾ ಇಡಿಯಟ್ ಅಂತೀನಿ—ಕನ್ನಡದ ಮಾತುಗಳೇ ಇಲ್ಲಾ ನನ್ನ ಮೂರ್ಖತನ ಹೇಳಿಕೊಳ್ಳಲು ಅಲ್ಲವೇ?

—ಶಿವು.



" ನಾರದರೇ ! 'ಪರ್ಮಿಟ್' ತಂದೀದಿರಾ ! ತಂತೀಗೆ ? "

# ಅನರ್ಥಕೋಶ

**ಅಜೀರ್ಣ :**—ಹಿಟ್ಲರ್ ಮುಂತಾದವರನ್ನು ಬಾಧಿಸುವ ವ್ಯಾಧಿ.

**ಅಶ್ವಾಮಿತ್ರ ಸೃಷ್ಟಿ :**—ಹೇಸರುಕತ್ತೆ.

**ಉತ್ತರಾಯಣ :**—ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೆ ಪರೀಕ್ಷೆಗಳಲ್ಲಿ ಪ್ರಶ್ನ ಪತ್ರಿಕೆಗಳನ್ನು ಮಾಡುವ ಕಾಲ.

**ಗಗನ ರೋದನ :**—ರೇಡಿಯೋ ಪ್ರಚಾರ.

**ಚಮಚ :**—ಕೈಯ್ಯಿಂದ ಮುಟ್ಟಲು ಅಸಹ್ಯವೆನಿಸುವ ಪದಾರ್ಥಗಳನ್ನು ಬಾಯಿಗೆ ಸಾಗಿಸಲು ಒದಗುವ ಉಪಕರಣ.

**ದಾಂಡೀವಿ :**—ದಾಂಡನ್ನು ಪ್ರಯೋಗಿಸಿ ಟೆಸ್ಟುಗಳಲ್ಲಿ ಸೆಂಚುರಿ ಜೀರುವ ಜೀರ.

**ಬಡವಾಗ್ನಿ :**—ಬಡಜನರ ಆಕ್ರೋಶ; ಕ್ರಾಂತಿಕಾರಕ.

**ಭಾಷೆ :**—ಮನಸ್ಸಿನಲ್ಲಿರುವ ಅಂಶಗಳನ್ನು ಮರೆಸಿ ಮುಚ್ಚಲು ಅನುಕೂಲಿಸುವ ಉಪಾಯ.

**ಮದ್ಯಾಹ್ನ :**—ಪಡಕಾನೆ ಮುಹೂರ್ತ.

**ಮಹನೀಯ :**—ನಮಗೆ ತೀರ ಅಪರಿಚಿತನಾದ ಮನುಷ್ಯ.

**ಮಾರ್ಕ್ಸ್‌ಂಡೇಯ :**—ಅಮೇರಿಕಾಗೆ ಹೆದರಿ, ಸ್ಟಾಲಿನ್ನನ್ನು ತಬ್ಬಿಕೊಳ್ಳುವ ಒಬ್ಬ ಯುವಕ.

**ರಾಗದ್ವೇಷ :**—ಸಂಗೀತವನ್ನು ಕೇಳಿದರೆ ಉಂಟಾಗುವ ಮನೋವಿಕಾರ.

**ರುಮಾಲು :**—ಬಟ್ಟತಲೆಯ ಮುಚ್ಚಳ.

**ವಜ್ರ :**—ಕುಟುಂಬ ಸೌಖ್ಯದ ಅಸ್ತಿಭಾರವಾದ ಒಂದು ಬಗೆಯ ಕಲ್ಲು.

**ವಹ್ವಾಚಾಪಲ್ಯ :**—ಇತರರಿಂದ ವಹವಾ ಎನಿಸಿಕೊಳ್ಳಬೇಕೆಂಬ ಚಪಲ.

**ಶಿರಚ್ಛೇದ :**—ಶಿರೋ ವೇದನೆಯಿಂದ ನರಳುವವರಿಗೆ ಅತ್ಯುತ್ತಮವಾದ ಔಷಧಿ.

**ಸಾಯಿತ್ಯ :**—ಹೆಚ್ಚು ದಿನ ಬಾಳಲು ಸತ್ವವಿಲ್ಲದ ಸಾಹಿತ್ಯ.

**ಸಂಕಟ :**—ದ್ವೇಷಿಸುವುದಕ್ಕಾಗಲಿ, ಅಸೂಯೆ ಪಡುವುದಕ್ಕಾಗಲಿ, ಯಾರೂ ಇಲ್ಲದಿರುವಾಗ ನಾವು ಅನುಭವಿಸುವ ಸುಖ.

—ನಾ. ಕಸ್ತೂರಿ.

# ವಸಂತದಲ್ಲಿ ಪೆಂಕೂ



★ ಬೀರಣ್ಣ ★

**ಸೂತ್ರಧಾರ**—"ಪ್ರಿಯೇ ನಿನ್ನ ಅಲಂಕಾರವು ಪೂರ್ತಿಯಾಗಿದ್ದರೆ ಇತ್ತಬಾ."

**ನಟಿ**—"ಆರ್ಯ, ಏನಪ್ಪಣೆ?"

**ಸೂತ್ರ**—"ಇಲ್ಲಿ ನೆರೆದಿರುವ ಸಭಿಕರಿಗೆ ಆನಂದವುಂಟಾಗುವಂತೆ ಒಂದು ಗಾನವನ್ನು ಮಾಡು."

**ನಟಿ**—"ಆರ್ಯಪುತ್ರ, ಆವುದನ್ನು ಕುರಿತು ಗಾನಮಾಡಲಿ?"

**ಸೂತ್ರ**—"ಪ್ರಿಯೆ, ಈಗತಾನೆ ಆರಂಭವಾಗಿರುವ ವಸಂತ ಋತುವನ್ನೇ ಕುರಿತು ಗಾನ ಮಾಡುವಳಾಗು."

ನಟಿಯು ಹಾವಭಾವ ವಿಲಾಸಗಳೊಂದಿಗೆ ಮಧುಮಾಸವನ್ನು ಕುರಿತು ಅರ್ಧ ಗಂಟೆ ಹಾಡುವಳು.

ಈ ಸಿನಿಮಾ ಯುಗದಲ್ಲಿ ಇದೆಲ್ಲಾ ಮಾಯವಾಗಿದೆ. ಆದರೂ ಜಾತಕ ಹೋದರೆ ನಕ್ಷತ್ರ ಹೋಯಿತೆ ಎಂಬಂತೆ ಸೂತ್ರಧಾರ ನಟಿಯರು ಮಾಯವಾಗಿದ್ದರೂ ವಸಂತಋತುವೇನೂ ಮಾಯವಾಗಿಲ್ಲ, ಅದರ ವಿಷಯವಾಗಿ ಹಾಡುವುದೂ ಹೋಗಿಲ್ಲ. ಮಾತೆತ್ತಿದರೆ "ಮಾಮರಂಗಳ್" ಚಿಗುರುವುದೂ, "ಕುಯಿಲಂಗಳ್" ಪಾಡುವುದೂ ನಮ್ಮ ಸಿನಿಮಾ ಹಾಡುಗಳಲ್ಲಿ ತುಂಬಿವೆ.

ಏತಕ್ಕೆ ಹೇಳಹೋದೆ ಎಂದರೆ, ಬೆಳಿಗ್ಗೆ ಎದ್ದೆ. ನೋಡಿದೆ. ಎಲ್ಲೆಲ್ಲಿಯೂ ಮರಗಳು ಚಿಗುರುವುದೂ, ಹೂಗಳೂ ಅರಳುವುದೂ, ಕೋಕಿಲಗಳು ಪಂಚಮ ರಾಗದಲ್ಲಿ ಪಾಡುವುದೂ ಕಾಣಿಸುತ್ತಿತ್ತು. ಮೈಯ್ಯಲ್ಲಿ ಏನೋ ಒಂದು ಹೊಸ ಹುರುಪು ಹುಟ್ಟಿದ ಹಾಗೆ ತೋರಿತು. ಏನಿರಬಹುದು ಅಂದುಕೊಂಡೆ. ನನಗೆ ಸಾಧಾರಣವಾಗಿಯೇ ಸ್ವಲ್ಪ ವಾಯು ಶರೀರ. ಬೆಳಿಗ್ಗೆ ಎದ್ದ ಕೂಡಲೇ ಸೊಂಟ ನೋವು, ಕೀಲು ನೋವು, ಇತ್ಯಾದಿ. ಒಂಭತ್ತು ಗಂಟೆಯಾದರೂ ಏಳುವುದಕ್ಕೆ ಮನಸ್ಸಿಲ್ಲದೆ ಬಿದ್ದುಕೊಂಡಿರುತ್ತಿದ್ದ ನನಗೆ ಈ ದಿವಸ ಇದೇನು ಇಷ್ಟು

ಉತ್ಸಾಹ, ಇಷ್ಟು ಲವಲವಿಕೆ, ಪ್ರಪಂಚವನ್ನೇ ಗೆದ್ದುಬಿಡಬಹುದೆಂಬ ಹುಮ್ಮಸ್ಸು! ಹಾಗೆಯೇ ಯೋಚನೆ ಮಾಡಿದೆ. ಥಟಕ್ಕನೆ ಹೊಳೆಯಿತು— ಮಧುಮಾಸವು ಪ್ರಾರಂಭವಾಗಿದೆಯೆಂದು!

ಮಧುಮಾಸಕ್ಕೂ ನನಗೂ ಏನು ಸಂಬಂಧ? ಆಜನ್ಮ ಬ್ರಹ್ಮಚಾರಿಯೆಂದು ನಿರ್ಧರಿಸಿಬಿಟ್ಟಿದ್ದೆ. ತಕ್ಕಮಟ್ಟಿಗೆ ವಯಸ್ಸೂ ಆಗಿದೆ. ಹೆಂಗಸರನ್ನು ಕಂಡರೆ ಬಲು ಗಾಭರಿ—ಅವರಿಗಂತೂ ನನ್ನನ್ನು ಕಂಡರೆ ಮತ್ತೂ ಗಾಭರಿ—ಅಂತಹ ಸೌಂದರ್ಯ ನನ್ನದು. ನಳ ಮಹಾರಾಜನು ಕಾರ್ಕೋಟಕನ ವಿಷದಿಂದ ಹೇಗಾಗಿದ್ದನೋ ಅದರ ತದ್ವತ್ ನಾನು! ನನ್ನನ್ನು ನೋಡಿಯೇ ಕವಿಯು "ಗಂಟು ಮೂಗಿನ, ಜಿಡ್ಡು ದೇಹದ" ಇತ್ಯಾದಿ ವರ್ಣನೆಯನ್ನು ಕದ್ದಿರಬೇಕು, ಎಂದು ನನ್ನ ನಂಬಿಕೆ.

"ಕಾಮಣ್ಣಾ" ಎಂದು ಕೂಗಿದೆ.

ಕಾಮಣ್ಣನು ಬಂದ. ನೀವು ತಪ್ಪು ತಿಳಿದುಕೊಳ್ಳುವುದಕ್ಕೆ ಮೊದಲೇ ಹೇಳಿಬಿಡುತ್ತೇನೆ. ನಾನು ಕೂಗಿದ್ದುದು ವಸಂತ ಕಾಲಕ್ಕೆ ಪ್ರಿಯನಾದ ಆ ಅನಂಗನನ್ನಲ್ಲ. ಕೇವಲ ಅಂಗವಂತನಾದ ನಮ್ಮ ಕಾಮಣ್ಣನನ್ನು—ನನ್ನ ಅಡಿಗೆಯವನು! ನನ್ನ ಅಣಿಯಾದ ಸಂಸಾರದಲ್ಲಿ ನಾನು ಮತ್ತು ನಮ್ಮ ಕಾಮಣ್ಣ, ನಮ್ಮ ಕಾಮಣ್ಣ ಮತ್ತು ನಾನು ಇಷ್ಟೇ. ಕಾಮಣ್ಣನು ನನಗೆ ಅಡಿಗೆ ಮಾಡಿ ಹಾಕುವನು, ಬಟ್ಟೆ ಒಗೆದು ಕೊಡುವನು, ಬಟ್ಟೆ ಹೊಲಿಸಿ ಕೊಡುವನು (ನನ್ನ ದುಡ್ಡಿನಲ್ಲೇ ಆದರೂ), ಬಟ್ಟೆ ಹಾಕಿಕೊಳ್ಳುವುದನ್ನು ಹೇಳಿ ಕೊಡುವನು, ಸಂದಿಗ್ಧ ಸಮಯಗಳಲ್ಲಿ ಸಲಹೆ ಕೊಡುವನು—ಮುಖ್ಯ ಅವನು ನನಗೆ ಇಂಗ್ಲೀಷಿನಲ್ಲಿ ಹೇಳುವಂತೆ "guide, philosopher and cook!" ಅವನಿಲ್ಲದಿದ್ದರೆ ಪಂಚಪ್ರಾಣಗಳಲ್ಲಿ ನಾಲ್ಕು ಹೋಗಿ ಒಂದೇ ಉಳಿದ ಪಶು ಜಂತು ಅಂದರೇನೂ ಅತಿಶಯೋಕ್ತಿಯಾಗಲಾರದು....

ಕೈಯ್ಯಲ್ಲಿದ್ದ ಸೌಟನ್ನು ಹಾಗೆಯೇ ಹಿಡಿದು ಬಂದ ಕಾಮಣ್ಣನು "ಕಾಫಿ, ತಿಂಡಿ ಸಿದ್ಧವಾಗಿದೆ—ಇವತ್ತು ಮಸಾಲ್ ದೋಸೆ ಮಾಡಿದ್ದೇನೆ" ಎಂದ.

ನಾನು ಕಿಟಕಿಯ ಹತ್ತಿರ ನಿಂತುಕೊಂಡು "ಪ್ರಾತಃಕಾಲ ಎಷ್ಟು ರಮ್ಯವಾಗಿದೆ, ನೋಡಿದಿಯಾ?"

"ಹೌದು....ಸ್ನಾನಕ್ಕೆ ನೀರು ಬೆರಿಸಿಟ್ಟಿದ್ದೇನೆ"

"ವಸಂತಋತು ಪ್ರಾರಂಭವಾಗಿಬಿಟ್ಟಿತು...."

"....ಮಧ್ಯಾಹ್ನಕ್ಕೆ ಸೌತೆಕಾಯಿ ಕೂಟು, ಅಲೂಗಡ್ಡೆ ಪಲ್ಯ"

"ಮಧುಮಾಸಂ ಪರಿಶೋಭಿಕುಮಿಕೊ" ಇತ್ಯಾದಿ ಏನು?"

"ಸಂಜೆಗೆ ಈರುಳ್ಳಿ ಹಾಕಿ ಉಪ್ಪಿಟ್ಟು, ಬದನೇಕಾಯಿ ಬೋಂಡ"

ಕಾಮಣ್ಣನು ಕೇವಲ ಅರಸಿಕನೆಂದು ಮನಸ್ಸಿನಲ್ಲಿ ಮಾಡಿಕೊಂಡು, "ಸ್ನಾನಮಾಡಿಕೊಂಡು ಬರುತ್ತೇನೆ, ರೇಷ್ಮೆ ಜುಬ್ಬಾ, ಜರತಾರಿ ಅಂಗವಸ್ತ್ರ, ಮಲ್ಲು ಪಂಚೆ ಮತ್ತು ಮೊನ್ನೆ ಕೊಂಡುಕೊಂಡ ಹೊಸ ಚಪ್ಪಲಿ ಜತೆ, ಇವುಗಳನ್ನು ತೆಗೆದಿಡು. ನಾನು ಈ ಬೆಳಿಗ್ಯೆ ಹಾಗೇ ಉದ್ಯಾನವನಕ್ಕೆ ಹೋಗಿ ಪ್ರಕೃತಿ ಸೌಂದರ್ಯವನ್ನನುಭವಿಸಿ ಬರುತ್ತೇನೆ" ಎಂದೆ.

ಉದ್ಯಾನದಲ್ಲಿ ಗುಬ್ಬಿಗಳು ಚಲಿಪಿಲಿಗುಟ್ಟುವುದು, ಸುಯ್ನಾಳಿಗೆ ತರಗೆಲೆಗಳು ಸುತ್ತಿ ಸುತ್ತಿ ಹಾರಾಡುವುದು, ಇರುವೆಗಳು ಸಾಲಾಗಿ ಗೂಡಿಂದ ಗೂಡಿಗೆ ಹೋಗುವುದು ಇವುಗಳ ಸೊಬಗನ್ನೆಲ್ಲಾ ಅನುಭವಿಸುತ್ತಾ, ಮನಸ್ಸಿನಲ್ಲಿ ಈಗ ಯಾರಾದರೂ ಅಪ್ಸರ ಸ್ತ್ರೀಯು ಬಂದು "ರಕ್ಷಿಸು ರಕ್ಷಿಸು, ಈ ರಾಕ್ಷಸಾಧಮನು ನನ್ನನ್ನು ಕೊಂಡೊಯ್ಯುತ್ತಿರುವನು, ನನ್ನನ್ನು ರಕ್ಷಿಸು" ಎಂದು ಶರಣು ಹೊಕ್ಕರೆ ಅವಳನ್ನು ಬಿಡಿಸಲು ರಾಕ್ಷಸನೊಡನೆ ಯುದ್ಧಕ್ಕೆ ಹೋಗಲೂ ಸಿದ್ಧ ಎಂದುಕೊಳ್ಳುತ್ತಾ ಹೋಗುತ್ತಿರಲು, ಅಪ್ಸರಸ್ತ್ರೀಗೆ ಬದಲಾಗಿ ಗಂಟುಬಿದ್ದ ನಮ್ಮ ವೆಂಕೂ!

"ಇದೇನೊ ವೆಂಕೂ!"

"ಏನು?"

"ಇದೇನು ಈ ಅವತಾರ!"

"ಯಾವ?"

"ಈ ನಿನ್ನ ಹಸಿರು ಅಂಗಿ, ನೀಲಿ ಷರ್ಟು, ಕೆಂಪು ಷರಾಯಿ?"

"ಏಕೆ, ಚೆನ್ನಾಗಿಲ್ಲವೆ?"

"ಕಣ್ಣಿಗೆ ರಾಹು ಹೊಡೆದ ಹಾಗಿದೆಯಲ್ಲೊ!"

ಕೆಂಪೇರಿದ ಮುಖದಿಂದ "ಯಾರೋ ಚೆನ್ನಾಗಿದೆ ಎಂದು ಹೇಳಿದರು—ಹೊಲಿಸಿಕೊಂಡೆ" ಎಂದ.

ಇದರ ಮರ್ಮ ನನಗೆ ಅರ್ಥವಾಗಲಿಲ್ಲ. ಯಾರೋ ಚೆನ್ನಾಗಿದೆ ಎಂದರೆ, ಈ ಕಾಮನ ಬಿಲ್ಲಿನ ರಂಗುಗಳನ್ನು ಏರಿಸಿಕೊಂಡು ಬಿಡುವುದೇ?

ಹಾಗೆಯೇ ಅಡ್ಡಾಡುತ್ತಾ ಒಂದು ಕಲ್ಲು ಬೆಂಚಿನ ಮೇಲೆ ಕುಳಿತೆವು. ವೆಂಕುವು ಏನನ್ನೋ ಬಹಳ ಹೊತ್ತು ಯೋಚಿಸುತ್ತಿದ್ದವನು ಇದ್ದಕ್ಕಿದ್ದ ಹಾಗೆ,

"ನೋಡು, ನಿನಗೆ ಮಂಜುಳ ಎಂಬ ಹೆಸರು ಹಿಡಿಸುತ್ತೆಯೇ?" ಎಂದನು.

"ಇಲ್ಲ, ಯಾಕೆ?"

"ಹಿಡಿಸುವುದಿಲ್ಲವೆ?"

"ಇಲ್ಲ."

"ಆ ಹೆಸರನ್ನು ಕೇಳಿದರೆ ಕೂಡಲೆ ಮೈ ರೋಮಾಂಚಕವಾಗುವುದಿಲ್ಲವೆ?"

"ಇಲ್ಲ."

"ಎಳೆಯ ತಳಿರುಗಳಲ್ಲಿ ಮಂದಮಾರುತವು ತಾಂಡವವಾಡಿದಂತೆ ಭಾಸವಾಗುವುದಿಲ್ಲವೆ?"

"ಇಲ್ಲ."

"ದೂರದಲ್ಲಿ ಪುಟ್ಟ ಪುಟ್ಟ ಬೆಳ್ಳಿಯ ಗಂಟೆಗಳು ನಿನದ ಮಾಡಿದಂತೆ?"

"ಖಂಡಿತವಾಗಿಯೂ ಇಲ್ಲ"

"ಹೋಗಲಿ, ಸಣ್ಣ ಸಣ್ಣ ಬೆಣಚು ಕಲ್ಲುಗಳ ಮೇಲೆ ಚಿಕ್ಕ ಪರ್ವತ ಝರಿಯು ನಲಿದಾಡಿದಂತಾದರೂ?"

"ಇಲ್ಲವೇ ಇಲ್ಲ. ಮಂಜುಳ—ಏನೋ ಗಂಜಳ ಎಂದ ಹಾಗಿದೆಯಪ್ಪ!"

ವೆಂಕುವು ಸ್ವಲ್ಪ ದೂರ ಸರಿದು ನನ್ನನ್ನು ಅಸಹ್ಯದಿಂದ ನೋಡಿದನು. ಹಾಗೇ ಸುಮ್ಮನಿದ್ದು ಆಮೇಲೆ ನಿಟ್ಟುಸಿರು ಬಿಟ್ಟು "ನಿನ್ನನ್ನು ಕೇಳಿ ಏನು ಪ್ರಯೋಜನ? ನಿನಗೆ ಸ್ವಲ್ಪವೂ ರಸಿಕತ್ವವಿಲ್ಲ. ಗೂಳಿಯ ಹಾಗೆ ತಿಂದುಕೊಂಡಿರುವುದೊಂದು ಗೊತ್ತು? ಎಂದುಬಿಟ್ಟ. ಮನೆಯಲ್ಲಿ ಕಾಮಣ್ಣನು ತಯಾರಿಸುತ್ತಿದ್ದ ಸೌತೇಕಾಯಿ ಕೂಟು, ಆಲೂಗಡ್ಡೆ ಪಲ್ಯಗಳ ಕಡೆ ಆಗಲೇ ಯೋಚನೆ ಹೊರಟಿದ್ದ ನನಗೆ ಇದು ನಿಜವಿದ್ದರೂ ಇರಬಹುದೆಂದೆನಿಸಿತು.

"ಹೋಗಲಿ ಬಿಡು, ಯಾರವಳು?" ಎಂದೆ.

ಇಲ್ಲಿ ನಮ್ಮ ವೆಂಕು ವಿಚಾರ ಸ್ವಲ್ಪ ಹೇಳಬೇಕು. ಚಿಕ್ಕಂದಿನಲ್ಲಿಯೇ ಅವನ ತಂದೆ ತಾಯಿಗಳು ತೀರಿಹೋಗಿದ್ದರು. ಅವನ ಚಿಕ್ಕಪ್ಪ ಒಳ್ಳೇ ಆಸ್ತಿವಂತ. ಮದುವೆ ಇಲ್ಲ, ಮಕ್ಕಳಿಲ್ಲ. "ಆನೆ ಕಾಲಿಗೆ ಆನಂದಾಂಜನ. ದೊಡ್ಡ ಸೀಸೆ ಎಂಟಾಣೆ, ಚಿಕ್ಕ ಸೀಸೆ ಆರಾಣೆ" ಎಂಬ ಔಷಧವನ್ನು ತಯಾರಿಸಿ, ಕಣಿವೆ ಕೆಳಗಿನವರಿಗೆ ಮಾರಿ ಮಾರಿ, ಲಕ್ಷಾಧೀಶ್ವರನಾಗಿ, ವ್ಯಾಪಾರವು ಇಳಿಮುಖವಾಗುವ ವೇಳೆಗೆ ಅದರ ಹಕ್ಕನ್ನು ಇತರರಿಗೆ ಮಾರಿಬಿಟ್ಟು ಕೈ ತೊಳೆದುಕೊಂಡು ಬಿಟ್ಟಿದ್ದ. ವೆಂಕುವನ್ನು ಅವನೇ ಹಾಸ್ಟಲಿನಲ್ಲಿಟ್ಟು ಓದಿಸಿದವನು. ವೆಂಕುವು

ಕುಂಟುತ್ತಾ ಕುಂಟುತ್ತಾ ಹಾಗೆ ಹೀಗೆ ಮಾಡಿ ಸ್ಕೂಲ್ ಫೈನಲ್ ಪ್ಯಾಸು ಮಾಡುವ ವೇಳೆಗೆ ಇಪ್ಪತ್ತುಮೂರು ವಯಸ್ಸಾಗಿದ್ದಿತು. ಅದೇ ಓದಿಗೂ ಫೈನಲ್. ಕೆಲಸದ ಅವಶ್ಯಕತೆಯೇನೂ ಇರಲಿಲ್ಲ. ತಿಂಗಳಿಗೆ ನೂರು ರೂಪಾಯಿ ಅವನ ಖರ್ಚಿಗಾಗಿ ಚಿಕ್ಕಪ್ಪನು ಕೊಟ್ಟುಬಿಡುತ್ತಿದ್ದುದರಿಂದ ಒಂದು ಹೋಟಲಿನಲ್ಲಿ ಕೊಠಡಿ ತೆಗೆದುಕೊಂಡು ಅಲ್ಲಿಯೇ ಇದ್ದುಬಿಟ್ಟಿದ್ದನು. ಕಾಲ ಕ್ರಮದಲ್ಲಿ ಚಿಕ್ಕಪ್ಪನ ಆಸ್ತಿಯೆಲ್ಲಾ ಅವನಿಗೇ ಎಂಬ ನಿರೀಕ್ಷಣೆ. ಇನ್ನೂ ಮದುವೆಯಾಗಿರಲಿಲ್ಲ. ನಿನಗೆ ಬೇಕಾದ ಹುಡುಗಿಯನ್ನು ಆರಿಸು, ನನಗೂ ಒಪ್ಪಿದರೆ ಮದುವೆ ಮಾಡಿಬಿಡುತ್ತೇನೆಂದು ಚಿಕ್ಕಪ್ಪನು ಹೇಳಿಬಿಟ್ಟಿದ್ದನು.

ನಮ್ಮ ವೆಂಕುವು ಸ್ವಭಾವತಃ ಸ್ವಲ್ಪ ರಸಿಕ. ಇಂದಿನ ಸಿನಿಮಾಗಳನ್ನು ನೋಡಿ, ನೋಡಿ ಅವುಗಳ ಪರಿಣಾಮ ಅವನ ಮೇಲೆ ಚೆನ್ನಾಗಿ ಆಗಿದ್ದಿತು. ಆಗ್ಗೆ ತಿಂಗಳಿಗೊಮ್ಮೆ ಒಂದೊಂದು ಹುಡುಗಿಯ ವಿಷಯದಲ್ಲಿ ಪರವಶನಾಗುತ್ತಿದ್ದ. ಆದರೆ ಅದೇನೋ ಮದುವೆಯವರೆಗೂ ಯಾವುದೂ ಫಲಿಸಿರಲಿಲ್ಲ. ಅಂತೂ ಸ್ವಲ್ಪ "ರೋಮಾಂಟಿಕ್ (Romantic)" ಅಂತಾರಲ್ಲ, ಹಾಗೆ!

ನಿನಗವಳನ್ನು ಪರಿಚಯಮಾಡಿಕೊಡಲೆ?" ಎಂದ.

ನಾನೂ, ವೆಂಕುವೂ ಚಿಕ್ಕಂದಿನಿಂದ ಒಟ್ಟಿಗಿದ್ದವರು. ಮುಂದೆ ಅವನ ಪತ್ನಿಯಾಗಬಹುದಂಥಾವಳನ್ನು ಪರಿಚಯಮಾಡಿ ಕೊಡಲೆ ಎಂದರೆ ಹೇಗೆ ಬೇಡವೆನ್ನುವುದು?

"ಆಗಲಿ" ಎಂದೆ.

ವೆಂಕುವು ನನ್ನನ್ನು ಕರೆದುಕೊಂಡು ಹೊರಟನು. ಅಂಗಡಿ ಬೀದಿಯ ಕಡೆ ತಿರುಗಿದನು. ಆಧುನಿಕ ರೀತಿಯ ಒಂದು ದೊಡ್ಡ ಜವಳಿ ಅಂಗಡಿ. ಬಾಗಿಲಲ್ಲಿ ದವಾಲಿ ಜವಾನ, ಒಳಗೆಲ್ಲಾ ಎಲೆಕ್ಟ್ರಿಕ್ ಫ್ಯಾನುಗಳು ಇತ್ಯಾದಿ. ನವೀನ ಪದ್ಧತಿಗೆ ತಕ್ಕಂತೆ, ಗಿರಾಕಿಗಳ ಅಪೇಕ್ಷೆಗಳನ್ನು ವಿಚಾರಿಸುವುದಕ್ಕೆ ಮೇಜಿನ ಹಿಂದೆ ಜಾರ್ಜೆಟ್ ಸೀರೆ, ವಾಯಿಲ್ ಜೋಳಿ, ಫೇಸ್ ಪೌಡರ್, ತುಟಿ ರಂಗು ಇವುಗಳಿಂದ ವಿಭೂಷಿತಳಾದ ಯುವತಿ....

ವೆಂಕುವು "ನಮಸ್ಕಾರ, ಮಿಸ್ ಮಂಜುಳ" ಎಂದನು.

"ನಮಸ್ಕಾರ, ಮಿಸ್ಟರ್ ವೆಂಕ್!"

"ನೀವು ಶಿಫಾರಸು ಮಾಡಿಕೊಟ್ಟ ಬಟ್ಟೆಗಳನ್ನು ಹೊಲಿಸಿಕೊಂಡಿದ್ದೇನೆ...."

"ನೋಡಿದೆ. ಬಹಳ ಚೆನ್ನಾಗಿ ಒಪ್ಪುತ್ತೆ. ಅದರ ಜತೆಗೆ ಸರಿಹೋಗುವ ಒಂದು ನೆಕ್‌ಟೈಯನ್ನೂ ತೆಗೆದಿಟ್ಟಿದ್ದೇನೆ" ಎಂದು ಒಂದು ಅಚ್ಚಹಳದೀ ಬಣ್ಣದ ನೆಕ್‌ಟೈ ತೆಗೆದುಕೊಟ್ಟಳು. ಅದನ್ನು ನೋಡಿದರೆ ವಾಂತಿ ಬರುವ ಹಾಗಿತ್ತು.

"ಓಹೋ, ಬಹಳ ಚೆನ್ನಾಗಿದೆ, ಕೊಡಿ" ಎಂದು ತೆಗೆದುಕೊಂಡು ವೆಂಕುವು "ಇವರು ನನ್ನ ಪ್ರಿಯ ಸ್ನೇಹಿತರು—ಮಿಸ್ಟರ್...." ಎಂದು ಹೇಳುವುದರಲ್ಲೇ ಆಕೆಯು,

"ಬಹಳ ಸಂತೋಷ. ಅವರಿಗೇನು ಕೊಡಲಿ? ಈ ಆಕಾಶ ಬಣ್ಣದ ಕಾಶ್ಮೀರದ ರೇಷ್ಮೆ ಬಟ್ಟೆಯಲ್ಲಿ ಜುಬ್ಬಾ ಬಹಳ ಅಂದವಾಗಿರುತ್ತೆ. ಅದರ ಜತೆಗೆ ಈ ಹಸಿರು ಮಖಮಲ್ಲು 'ನೆಹ್ರೂ ವೇಸ್ಟ್' ಹೊಲಿಸುವುದಕ್ಕೆ ಸರಿಯಾಗಿದೆ."

"ಅವರಿಗೆ ಆ ಬಣ್ಣಗಳು ಬಹಳ ಇಷ್ಟ, ಕಟ್ಟಿಸಿಕೊಡಿ" ಎಂದ ವೆಂಕು. ನಾನು ಬೇಡವೆಂದು ಹೇಳುವುದಕ್ಕೆ ಮೊದಲೇ ಆಕೆಯು ಆ ಬಟ್ಟೆಗಳನ್ನು ಅಳೆಸಿ, ಹರಿಸಿ ಕಟ್ಟಿಸಿಬಿಟ್ಟಳು.

"ಮತ್ತೇನಾದರೂ ಬೇಕೆ?"

ನಾನು ಬೇಗ "ಮತ್ತೇನೂ ಬೇಡ, ಬಹಳ ಥ್ಯಾಂಕ್ಸ್! ನಮಸ್ಕಾರ!" ಎಂದು ಬಿಲ್ ತೆಗೆದುಕೊಂಡು, ನೆಕ್‌ಟೈದೂ ಸೇರಿಸಿ ದುಡ್ಡುಕೊಟ್ಟುಬಿಟ್ಟು, ಬಾಯಿಬಿಟ್ಟುಕೊಂಡು ಅವಳನ್ನೇ ನೋಡುತ್ತಾ ನಿಂತಿದ್ದ ವೆಂಕುವನ್ನೂ ಎಳೆದು ಕೊಂಡು ಬದುಕಿದೆನಪ್ಪಾ ಎಂದುಕೊಳ್ಳುತ್ತಾ ಹೊರಗೆ ಬಂದುಬಿಟ್ಟೆ.

ಮನೆ ಕಡೆ ಹೋಗುತ್ತಾ ಕೇಳಿದೆ—"ಅವಳು ಯಾವ ಜಾತಿ? ಕುಲ ಗೋತ್ರ ಹೇಗೆ?"

ವೆಂಕುವು "ಅವೆಲ್ಲಾ ಯಾಕೆ? ಈಗಿನ ಕಾಲದಲ್ಲಿ ಜಾತಿ, ಕುಲ, ಗೋತ್ರ ಇವೊಂದೂ ನೋಡಬಾರದು. ಸಗೋತ್ರ ವಿವಾಹ, ಹಿಂದೂ ಕೋಡ್ ಬಿಲ್ ಇತ್ಯಾದಿ ಗೊತ್ತಿಲ್ಲವೆ, ಸರ್ಕಾರವೇ ಕಾಯಿದೆ ಮಾಡುತ್ತಿದ್ದಾರೆ" ಎಂದ. "ಅಲ್ಲದೆ, ಅವು ಯಾವುದನ್ನು ಅಷ್ಟಾಗಿ ವಿಚಾರಿಸಲೂ ಇಲ್ಲ. ಅವಳು ನಮ್ಮ ಜಾತಿಯಲ್ಲ, ಅಪ್ಪ ಅಮ್ಮ ಯಾರೂ ಇಲ್ಲ, ಅಷ್ಟು ಗೊತ್ತು."

"ಹಾಗಾದರೆ, ನೀನು ಅವಳನ್ನು ಮದುವೆಮಾಡಿಕೊಳ್ಳುತ್ತೀಯಾ?"

ಎಲ್ಲಾ ನಿಶ್ಚಯವಾದಂತೆಯೇ, ಇನ್ನೂ ಗುಟ್ಟಾಗಿಯೇ ಇಟ್ಟಿದ್ದೇನೆ."

"ಕಾರಣ?"

"ನಮ್ಮ ಚಿಕ್ಕಪ್ಪ ಏನು ಹೇಳುವನೋ ಎಂದು. ಇಲ್ಲಿ ನಿನ್ನ ಸಹಾಯ ನಮಗೆ ಬೇಕಾಗಿದೆ."

"ಇಲ್ಲಿ ನೋಡು ವೆಂಕೂ, ನನಗೂ ಈ ವಿಚಾರಗಳಿಗೂ ಸಂಬಂಧವೇ ಇಲ್ಲ. ನನ್ನನ್ನು ಇದಕ್ಕೆಲ್ಲಾ ಎಳೆಯಬೇಡ."

"ನೋಡಿದೆಯಾ, ನೀನು ನನ್ನ ಬಾಲ್ಯಸ್ನೇಹಿತನಲ್ಲವೆ?"

"ಇರಬಹುದು."

"ಅಲ್ಲದೆ ನಾನು ಒಂದು ಸಲ ನಿನ್ನ ಪ್ರಾಣವನ್ನು ಉಳಿಸಲಿಲ್ಲವೆ?"

"ಅದು ಯಾವಾಗ?"

"ನೀನಲ್ಲವೆ? ಮತ್ಯಾರದೋ ಇರಬೇಕು........ಹೋಗಲಿ, ನಾವಿಬ್ಬರೂ ಒಂದೇ ಸೀಬೇ ಮರದಲ್ಲಿ ಹಣ್ಣು ಕದಿಯಲು ಹೋಗಿ ಸಿಕ್ಕಿಹಾಕಿಕೊಂಡಿರ ಲಿಲ್ಲವೆ?"

"ಇರಬಹುದು."

"ಈಗ ನೀನು ಸಹಾಯ ಮಾಡಲೇಬೇಕು."

"ನಮ್ಮ ಚಿಕ್ಕಪ್ಪನಿಗೆ ಜಾತಿ, ಕುಲ, ಗೋತ್ರ ಇವುಗಳಲ್ಲಿ ಬಹಳ ಭಕ್ತಿ. ನಾನು ಮಂಜುಳೆಯನ್ನು ಮದುವೆಯಾಗಲು ಒಪ್ಪುವುದಿಲ್ಲ. ಅಲ್ಲದೆ, ಅವನು ನನಗೆ ತಿಂಗಳು ತಿಂಗಳಿಗೆ ಕೊಡುತ್ತಿರುವ ಹಣ ಸ್ವಲ್ಪವೂ ಸಾಲದು. ಅದರ ಎರಡರಷ್ಟಾದರೂ ಕೊಡಿಸಲೇಬೇಕು."

"ಇದು ನನ್ನಿಂದ ಸಾಧ್ಯವಿಲ್ಲ. ನೀನೇ ಕೇಳು."

"ನನಗೆ ಹೆದರಿಕೆ. ಈಗ ಕೊಡುತ್ತಿರುವುದನ್ನೂ ತಪ್ಪಿಸಿಬಿಟ್ಟರೆ?"

"ಇದಕ್ಕೇನಾದರೂ ಉಪಾಯ ಮಾಡಬೇಕು. ನನಗೇನೂ ಹೊಳೆಯುವು ದಿಲ್ಲವಲ್ಲ."

ನೀನಗೇ ಹೊಳೆಯುತ್ತೆ ಎಂದು ನಿನ್ನನ್ನು ಕೇಳಲಿಲ್ಲ. ಅಲ್ಲ, ತಪ್ಪು ತಿಳಿದುಕೊಳ್ಳಬೇಡ. ನಿನಗೆ ಅಷ್ಟೆಲ್ಲಾ ಮೆದುಳಿಲ್ಲಾ ಎನ್ನುವುದು ತಿಳಿದ ವಿಷಯವಲ್ಲವೆ?"

"ಅದು ಹೇಗೆ?"

"ಸ್ಕೂಲ್ ಫೈನಲ್ ಪ್ಯಾಸು ಮಾಡಲು ನೀನು ನನಗಿಂತ ಎರಡು ವರ್ಷ ಜಾಸ್ತಿ ತೆಗೆದುಕೊಳ್ಳಲಿಲ್ಲವೆ?

"ನಿಜ."

"ನಿನಗೆ ಮೆದುಳಿದ್ದಿದ್ದರೆ ಹಾಗಾಗುತ್ತಿತ್ತು."

"ಇಲ್ಲ"

"ಅದಕ್ಕೇ!"

"ಹಾಗಾದರೆ, ನನ್ನನ್ನು ಯಾಕೆ ಸಹಾಯ ಕೇಳಿದೆ?"

"ನಿನ್ನ ಮುಖಾಂತರ ನಿಮ್ಮ ಕಾಮಣ್ಣನ ಸಲಹೆ ತೆಗೆದುಕೊಳ್ಳೋಣವೆಂದು ಅವನ ಅಸಾಧಾರಣ ಬುದ್ಧಿಗೆ ಏನಾದರೊಂದು ಉಪಾಯ ಹೊಳೆಯಬಹುದು."

ನ್ಯಾಯವೆಂದು ಒಪ್ಪಿಕೊಂಡೆ....

ಆ ದಿನ ಊಟವೆಲ್ಲಾ ಮುಗಿದ ಮೇಲೆ ಕಾಮಣ್ಣನನ್ನು ಕರೆದೆ.

"ನಿನ್ನ ಕೆಲಸವೆಲ್ಲಾ ಆಯಿತು ತಾನೆ, ಕಾಮಣ್ಣ"

"ಆಯಿತು"

"ಮತ್ತೇನೂ ತುರ್ತಾಗಿ ಮಾಡಬೇಕಾದ್ದಿಲ್ಲವಷ್ಟೆ?"

"ಇಷ್ಟು ಹೊತ್ತಿನಲ್ಲಿ ಸಾಧಾರಣವಾಗಿ ನಾನು ಉಪಯೋಗಕರವಾದ ಯಾವುದಾದರೊಂದು ಗ್ರಂಥವನ್ನು ಓದುವ ವಾಡಿಕೆ. ಆದರೆ, ತಮಗೇನಾದರೂ ಈಗ ಬೇಕಾಗಿದ್ದರೆ ಅದನ್ನು ಆಮೇಲೆ ಮಾಡಿಕೊಳ್ಳುತ್ತೇನೆ. ಅಲ್ಲದೆ ಈವತ್ತಿಗೆ ವಜಾನೇ ಮಾಡಿಬಿಡುತ್ತೇನೆ."

"ನನಗೆ ಈಗ ನಿನ್ನ ಸಲಹೆ ಸ್ವಲ್ಪ ಬೇಕಾಗಿದೆ."

"ಸಿದ್ಧನಾಗಿದ್ದೇನೆ."

"ನಿನಗೆ ವೆಂಕಣ್ಣನವರು ಗೊತ್ತಷ್ಟೆ?"

"ಯಾವ ವೆಂಕಣ್ಣ? ಇಲ್ಲಿಗೆ ಆಗಾಗ್ಯೆ ಬರುವ ನಿಮ್ಮ ಸ್ನೇಹಿತ ವೆಂಕೂರವರೋ, ಇಲ್ಲಿ ರಾವ್‌ಸಾಹೇಬ್ ರಸ್ತೆ, ೨೮ನೇ ನಂಬರು ಮನೆಯಲ್ಲಿರುವ ಅವರ ಚಿಕ್ಕಪ್ಪ ವೆಂಕಣ್ಣಯ್ಯನವರೊ?"

ಕಾಮಣ್ಣನಿಗೆ ತಿಳಿಯದ ವಿಷಯವೇ ಇಲ್ಲ. ಮನೆಯ ನಂಬರು ಮೊದಲುಗೊಂಡು ಎಲ್ಲಾ ಸಮಾಚಾರವನ್ನೂ ಇಟ್ಟಿರುತ್ತಾನೆ! ನಾನೂ ವೆಂಕೂ ಅಷ್ಟು ಸ್ನೇಹಿತರಾದರೂ ಅವನ ಚಿಕ್ಕಪ್ಪ ಇಂತಹ ಸ್ಥಳದಲ್ಲಿದಾನೆ ಎನ್ನುವುದೇ ಗೊತ್ತಿರಲಿಲ್ಲ.

"ಚಿಕ್ಕಪ್ಪ ವೆಂಕಣ್ಣಯ್ಯನವರು ರಾವ್‌ಸಾಹೇಬ್ ರಸ್ತೆಯಲ್ಲಿರುವುದು ನಿನಗೆ ಹೇಗೆ ಗೊತ್ತು?"

"ಅವರ ಮನೆಯಲ್ಲಿ ಅಡಿಗೆಗಿರುವವಳು ನನಗೆ ಸಂಬಂಧ. ವಿಧವೆ, ಕೆಲವು ವರ್ಷಗಳಿಂದ ಅವರ ಮನೆಯಲ್ಲಿ ಕೆಲಸಕ್ಕಿದ್ದಾಳೆ. ಬಹಳ ಚೆನ್ನಾಗಿ ಅಡಿಗೆ ಮಾಡುತ್ತಾಳೆ...."

ನಾನು ನಮ್ಮ ವೆಂಕು ವಿಚಾರವನ್ನೆಲ್ಲಾ ಕಾಮಣ್ಣನಿಗೆ ತಿಳಿಸಿದೆ. "ಏನಾದರೂ ಮಾಡಿ ನಾವೆಲ್ಲಾ ಸೇರಿ ವೆಂಕೂಗೆ ಸಹಾಯಮಾಡಬೇಕಾಗಿದೆ ನೋಡು, ಕಾಮಣ್ಣ. ಅವರ ಚಿಕ್ಕಪ್ಪನ ವಿಚಾರ ನಿನಗೇನು ಗೊತ್ತು?"

"ಆತ ಸ್ವಲ್ಪ ವಿಚಿತ್ರಸ್ವಭಾವದವರು. ಯಾರೊಡನೆಯೂ ಈಗ ಸೇರುವುದಿಲ್ಲ"

"ಹೇಗೆ ಕಾಲ ಕಳೆಯುತ್ತಾನೆ?"

"ಬೆಳಿಗ್ಗೆ ಎದ್ದಕೂಡಲೇ ತಿಂಡಿ ಕಾಫಿ. ಆ ಮೇಲೆ ಊಟಕ್ಕೆ ಏನಾಗ ಬೇಕೆಂಬುದರ ವಿವರವನ್ನು ಆಲೋಚಿಸಿ, ಒಂದು ಸ್ಲೇಟಿನ ಮೇಲೆ ಬರೆದು ಅಡಿಗೆ ಮನೆಗೆ ಕಳುಹಿಸಿಬಿಡುತ್ತಾರೆ. ನಂತರ ಒಂದು ಒಂದೂವರೆ ಘಂಟೆ ಹೊತ್ತು ಸ್ನಾನ ಇತ್ಯಾದಿ. ಬಂದು ಎರಡನೇ ಸಲದ ಕಾಫಿ ಕುಡಿದು ಮಧ್ಯಾಹ್ನದ ಉಪಹಾರಕ್ಕೆ ಬೇಕಾದುದರ ಪಟ್ಟಿ ತಯಾರಿಸುವ ವೇಳೆಗೆ ಊಟದ ಸಮಯವಾಗುತ್ತೆ. ಊಟಮಾಡಿ, ಮಲಗಿ ಎದ್ದನಂತರ ಉಪಹಾರ ಸ್ವೀಕರಿಸಿ ರಾತ್ರಿ ಊಟದ ವಿಚಾರವನ್ನು ವಿತರಣೆಯಾಗಿ ಆಲೋಚಿಸಿ ನಿರ್ಧರಿಸುತ್ತಾರೆ. ಸಾಯಂಕಾಲ ಕಾಂಪೌಂಡಿನಲ್ಲಿಯೇ ಸ್ವಲ್ಪ ಸುಳಿದಾಡುತ್ತಿದ್ದು ನಂತರ ರಾತ್ರಿ ಊಟ. ಊಟವಾದ ಮೇಲೆ ಸುಮಾರು ಮುಕ್ಕಾಲು ಘಂಟೆ ಹೊತ್ತು ಮಾರನೆ ಬೆಳಿಗ್ಗೆ ಕಾಫಿಯ ಜತೆಗೆ ಏನು ತಿಂಡಿ ಬೇಕೆಂಬುದನ್ನು ತೀರ್ಮಾನಿಸುವ ವೇಳೆಗೆ ಎಂಟೂವರೆ ಘಂಟೆಯಾಗುತ್ತೆ. ಹಾಲು ಕುಡಿದು ಒಂಭತ್ತು ಘಂಟೆಗೆ ಸರಿಯಾಗಿ ಮಲಗಿಬಿಡುತ್ತಾರೆ. ಇದೇ ಅವರ ದಿನಚರಿ.

"ಒಳ್ಳೇ ಹೊಟ್ಟೆಬಾಕ, ಅನ್ನು!"

"ನನ್ನ ಬಾಯಿಂದ ಆ ಪದವು ಅಷ್ಟು ಯುಕ್ತವಾಗಿ ಕಾಣುವುದಿಲ್ಲ. ಆದರೆ, ಊಟ ಉಪಚಾರ ವಿಷಯಗಳಲ್ಲಿ ಒಳ್ಳೇ ಭೋಗಿ ಎನ್ನಬಹುದು. ಅದಕ್ಕೇ ಅವರು ಅಡಿಗೆಯವಳಿಗೆ ಅಷ್ಟು ಹೆಚ್ಚು ಸಂಬಳ ಕೊಡುತ್ತಾರೆ. ಆಕೆ ಬಹಳ ಚೆನ್ನಾಗಿ ಅಡಿಗೆ ಮಾಡುವುದರಿಂದ ಎಷ್ಟೋ ಜನರು ನಮ್ಮಲ್ಲಿಗೆ ಬನ್ನಿ ಎಂದು ಆಕೆಯನ್ನು ಕರೆದಿದ್ದಾರೆ. ಹಾಗೆ ಕರೆದಾಗಲೆಲ್ಲಾ ವೆಂಕಣ್ಣಯ್ಯನವರು ಆಕೆಯ ಸಂಬಳಕ್ಕೆ ಬಡ್ತಿ ಕೊಡುತ್ತಾರೆ."

''ಹಾಗಾದರೆ ಯಾವುದಾದರೂ ಒಂದು ಒಳ್ಳೆ ಹಬ್ಬದೂಟವಾದಮೇಲೆ ಅವರಲ್ಲಿ ವೆಂಕುವನ್ನು ತನ್ನ ವಿಚಾರವನ್ನು ಪ್ರಸ್ತಾಪಿಸುವಂತೆ ಛೂ ಬಿಟ್ಟರೆ?''

''ಅದಕ್ಕೆ ಈಗ ಸ್ವಲ್ಪ ಅನಾನುಕೂಲ. ಕೆಲವು ದಿವಸಗಳ ಹಿಂದೆ ಅವರಿಗೆ ಅಜೀರ್ಣದ ಖಾಯಿಲೆಯಾಗಿ ಡಾಕ್ಟರು ಕೆಲವು ದಿವಸ ಬಹಳ ಕಠಿಣ ಪಥ್ಯ ವಿಧಿಸಿದ್ದಾರೆ.''

''ಹಾಗಾದರೆ, ವಿಷಯ ಸ್ವಲ್ಪ ಕ್ಲಿಷ್ಟವಾಗಿದೆ ಏನು?"

ಕಾಮಣ್ಣನು ಹಾಗೆಯೇ ಆಲೋಚಿಸಿದನು. ಕಾಮಣ್ಣನು ಆಲೋಚಿಸುವುದೆಂದರೆ ಸಾಧಾರಣವಲ್ಲ. ಕಣ್ಣುಗಳು ಎಲ್ಲಿಯೋ ತೇಲಿಹೋಗುವುವು. ಹಣೆಯಲ್ಲಿ ಎಂಟಕ್ಕೆ ಕಡಿಮೆ ಇಲ್ಲದೆ ಸುಕ್ಕುಗಳು ಬಂದುಬಿಡುವುವು. ಮೆದುಳಿನ ಕಣಗಳೆಲ್ಲಾ ಅಲ್ಲಾಡಿಬಿಡುವುವೋ ಎಂಬಂತೆ ಭಾಸವಾಗುವುದು.

ಬಹಿರ್ಮುಖನಾದ ಮೇಲೆ ''ವೆಂಕಣ್ಣಯ್ಯನವರ ಅನಾನುಕೂಲವನ್ನೇ ನಮ್ಮ ವೆಂಕೂರವರ ಅನುಕೂಲಕ್ಕೆ ಏರ್ಪಡಿಸಿಕೊಳ್ಳಬಹುದು'' ಎಂದ.

''ಅದು ಹೇಗೆ?"

''ಊಟದ ವಿಚಾರವನ್ನೇ ಯೋಚಿಸಬಾರದು ಎಂದು ಡಾಕ್ಟರು ಹೇಳಿದುದರಿಂದ ಅವರಿಗೆ ಕಾಲ ಕಳೆಯುವುದು ಕಷ್ಟವಾಗಿದೆ. ಈಚೆಗೆ ಒಬ್ಬ ವಿದ್ಯಾರ್ಥಿಯನ್ನು ಬಂದು ದಿನವೂ ಸ್ವಲ್ಪ ಹೊತ್ತು ಏನನ್ನಾದರೂ ಓದುವಂತೆ ನೇಮಿಸಿಕೊಂಡಿದ್ದಾರೆ. ನಮ್ಮ ವೆಂಕೂರವರು ಅವರ ದೇಹಸ್ಥಿತಿ ವಿಚಾರಿಸುವ ಹಾಗೆ ಹೋಗಿ ಆ ಕೆಲಸವನ್ನು ತಾನೇ ಮಾಡುತ್ತೇನೆಂದು ವಹಿಸಿಕೊಂಡರೆ....''

''ಓಹೋ, ಇಷ್ಟು ಕಷ್ಟ ನನಗೋಸ್ಕರ ತೆಗೆದುಕೊಳ್ಳುತ್ತಾನೆಂದು ಮನಸ್ಸು ಕರಗಿ....''

''ಅದೂ ಸರಿಯೆ....ಆದರೆ, ನಾನು ಹೇಳುತ್ತಿರುವುದು ಅವರು ಓದುವುದಕ್ಕಾಗಿ ಆರಿಸಿರುವ ಪುಸ್ತಕಗಳ ಮೇಲಿದೆ.''

''ಪುಸ್ತಕಗಳನ್ನು ಆರಿಸುವ ವಿಚಾರ ನಮ್ಮ ವೆಂಕುವಿಗೇನು ಗೊತ್ತಿದೆ, ಪಾಪ! ಅವನು ಓದುವುದು ಎಂದರೆ 'ತಂದೆ ನಾಡು! ಪತ್ರಿಕೆಯಲ್ಲಿ ಆಗಿಂದಾಗ್ಯೆ ಬರುವ 'ವರ ಬೇಕಾಗಿದೆ—ರೂಪವತಿಯಾದ ವಿದ್ಯಾವಂತಳಾದ ಯುವತೀ ಮಣಿಗೆ....' ಇತ್ಯಾದಿಯ ಜಾಹಿರಾತುಗಳು, ಇಲ್ಲ, ಸಿನಿಮಾ ವಿಚಾರ ಇವೆರಡೆ!"

''ಪುಸ್ತಕಗಳನ್ನು ಆರಿಸುವ ವಿಚಾರವನ್ನು ನನಗೆ ಬಿಡಬಹುದು.''

''ಇದರಿಂದಾಗುವುದೇನು? ನನಗೆ ಸರಿಯಾಗಿ ಅರ್ಥವಾಗಲಿಲ್ಲ.''

"ವಿವರಿಸುತ್ತೇನೆ. ಈಗ ಯಾವುದಾದರೊಂದು ಪದಾರ್ಥ ಬಹಳ ಚೆನ್ನಾಗಿದೆ, ಕೊಂಡುಕೊಳ್ಳಿ ಎಂದು ಯಾರಾದರೂ ಹೇಳಿದರೆ, ನೀವೇನು ಮಾಡುತ್ತೀರಿ?"

"ನನ್ನ ಸ್ನೇಹಿತರು, ತಿಳಿದವರಾದರೆ ನಂಬುವುದೇ ಇಲ್ಲ. ಬೇಡವೆನ್ನುತ್ತೇನೆ."

"ಅದನ್ನೇ ಪತ್ರಿಕೆಗಳಲ್ಲಿ ಸುಂದರ ರಮಣಿಯರ ಭಾವ ಚಿತ್ರದೊಂದಿಗೆ ಪ್ರಕಟಿಸಿದರೆ ಅಥವಾ ದೊಡ್ಡ ದೊಡ್ಡ ಗೋಡೆ ಚಿತ್ರಗಳಲ್ಲಿ ಸೂಚಿಸಿದರೆ?"

"ಓಹೋ, ನೀನು ಹೇಳುವುದು ಹೀಗೊ? ಈಗ, ಇಂತಹುದೇ ಹಲ್ಲುಪುಡಿಯನ್ನು ಕೊಳ್ಳಿರಿ ಎಂದು ಮೇಲೆ ಮೇಲೆ ವೃತ್ತಪತ್ರಿಕೆಗಳಲ್ಲಿ, ಬಸ್ಸುಗಳ ಮೇಲೆ, ಗೋಡೆಗಳ ಮೇಲೆ, ಸಿನಿಮಾಗಳಲ್ಲಿ ಜಾಹಿರಾತುಮಾಡಿದರೆ, ನೋಡಿ ನೋಡಿ, ಕಡೆಗೆ ತಡೆಯಲಾರದೆ ಹುಚ್ಚು ಹಿಡಿದಂತಾಗಿ ಹಲ್ಲಿಲ್ಲದಿದ್ದರೂ ಕೂಡ ಓಡಿ ಹೋಗಿ ಮೊದಲ ಅಂಗಡಿಯಲ್ಲಿ ಒಂದು ಡಬ್ಬಿಯನ್ನು ತೆಗೆದುಕೊಂಡು ಬರುವಂತಾಗುವುದಲ್ಲ, ಹಾಗೊ?"

"ಬಹಳ ಚೆನ್ನಾಗಿ ಗ್ರಹಿಸಿದಿರಿ. ಅದೇ ರೀತಿಯಲ್ಲೇ."

ಕಾಮಣ್ಣನ ಪ್ರಶಂಸೆಯನ್ನು ಕೇಳಿ ನನಗೆ ಚತುರ್ಭುಜವಾಯಿತು.

"ಆಮೇಲೆ?" ಎಂದೆ.

"ಸಮಾಜ ಸುಧಾರಣೆ, ಜಾತಿ ಭೇದ ನಿರ್ಮೂಲ, ಉಚ್ಚ ಜಾತಿಯವರು ಅನ್ಯ ಜಾತಿಯವರೊಂದಿಗೆ ವಿವಾಹ ಬೆಳೆಸುವುದು, ಪ್ರೇಮವೇ ಮುಖ್ಯ, ಜಾತಿಯಲ್ಲ ಎಂದು ಬೋಧಿಸುವುದು, ಕಾರ್ಮಿಕರ ಶ್ರೇಷ್ಠತೆ ಇತ್ಯಾದಿ ಧ್ಯೇಯಗಳುಳ್ಳ ಕತೆಗಳನ್ನು ಆರಿಸಿ ಓದಿದರೆ, ವೆಂಕಣ್ಣಯ್ಯನವರ ಮನಸ್ಸಿನ ಮೇಲೆ ನಮಗೆ ಬೇಕಾದ ಪರಿಣಾಮ ಉಂಟಾಗಿ, ಈ ಮಿಸ್ ಮಂಜುಳರವರನ್ನು ವೆಂಕೂರವರು ಮದುವೆಯಾಗಲು ಅನುಮತಿ ಕೊಡಬಹುದು...."

"ಕಾಮಣ್ಣ, ಬಹಳ ಘನವಾದ ಆಲೋಚನೆ. ನಿನ್ನ ಬುದ್ಧಿಶಕ್ತಿ ಅಸಾಧಾರಣ!"

"ತಮಗೆ ಉಪಯೋಗಕರವಾದ ಸಲಹೆ ಕೊಡುವುದೇ ನನ್ನ ಪರಮಯತ್ನ"

"ಆದರೆ ಇಂತಹ ಪುಸ್ತಕಗಳು ಎಲ್ಲಿದೆ? ನಮ್ಮ ಭಾಷೆಯಲ್ಲಿ?"

"ಓಹೋ, ಹೇರಳವಾಗಿವೆ. ಈಗ ಬರುವ ಕತೆಗಳೆಲ್ಲಾ ಇಂತಹವೇ.... 'ಪ್ರೇಮ ಜ್ಯೋತಿ' ಎಂಬುದನ್ನು ಓದಿಲ್ಲವೆ?"

“ಇಲ್ಲ.”

“‘ಪ್ರೇಮ ನಗರಿ’ಯನ್ನು?”

“ಇಲ್ಲ.”

“‘ಹರಿಜನ ಹುಡುಗಿಯೇ?’ ಎಂಬುದನ್ನು?”

“ಅದೂ ಇಲ್ಲ.”

“‘ಜಮೀನ್ದಾರ್ ರಂಗರಾಯರ ತ್ಯಾಗ’, ‘ಜಾತಿಯೋ, ಒಲವೊ’, ‘ಮರಳ ಪ್ರಕೃತಿಗೆ’?”

“ಇಲ್ಲ. ಇವು ಯಾವುದನ್ನೂ ಕೇಳಿಯೂ ಇಲ್ಲ.”

“ಆಧುನಿಕ ಸಾಹಿತ್ಯದಲ್ಲಿ ಇವೆಲ್ಲಾ ಇಂದು ಪ್ರಗತಿಮಾರ್ಗಕ್ಕೆ ದೀಪಿಕೆಗಳಂತಿವೆ. ಈ ಪುಸ್ತಕಗಳನ್ನು ಹೊಂದಿಸುವ ಭಾರ ನನಗಿರಲಿ.”

“ಹಾಗಾದರೆ ತಂದುಕೊಡು, ವೆಂಕುವಿಗೆ ಹೇಳುತ್ತೇನೆ.”

ಕಾಮಣ್ಣನು ತಂದುಕೊಟ್ಟ ಪುಸ್ತಕಗಳನ್ನು ವೆಂಕುವು ಚಿಕ್ಕಪ್ಪನಿಗೆ ಓದಲಾರಂಭಿಸಿದನು. ಅತನು ಮೊದಲು ಸ್ವಲ್ಪ ಬೇಸರ ಪಟ್ಟುಕೊಂಡರೂ ಬರಬರುತ್ತಾ ಮತ್ತು ಬೇಕೆನ್ನುವುದಕ್ಕಾರಂಭಿಸಿ, ಕೊನೆಗೆ ಪುಸ್ತಕಗಳನ್ನು ಸಾಕಷ್ಟು ಬೇಗ ಒದಗಿಸುವುದೇ ಕಾಮಣ್ಣನಿಗೆ ಪ್ರಯಾಸಕ್ಕೆ ಬಂದಿತು.

ಕೆಲವು ದಿನಗಳ ಮೇಲೆ ವೆಂಕುವು ಇದ್ದಕ್ಕಿದ್ದ ಹಾಗೆ ಪ್ರಾಪ್ತನಾದ.

“ಎಲ್ಲಾ ಹೇಗಿದೆ?” ಎಂದೆ.

“ಬಹಳ ತೃಪ್ತಿಕರವಾಗಿ ಮುಂದುವರಿಯುತ್ತಿದೆ. ಈಗ ನನಗೇ ಒಂದು ಹೊಸ ಚಮತ್ಕಾರವು ತೋಚಿದೆ....”

“ಏನದು? ಕಾಮಣ್ಣನಿಗೆ ಹೇಳಿ, ಅವನೇ ನನ್ನವನು, ಕೇಳೋಣವೆ?”

“ಕಾಮಣ್ಣನನ್ನು ಕೇಳುವ ಪ್ರಮೇಯವೇ ಇಲ್ಲ. ಇದನ್ನು ನಾನೇ ಆಲೋಚಿಸಿಟ್ಟಿದ್ದೇನೆ....ನೀನು ನಾಳೆ ಬುಧವಾರ ರಾತ್ರಿ ನಮ್ಮ ಚಿಕ್ಕಪ್ಪನ ಮನೆಗೆ ಊಟಕ್ಕೆ ಬರಬೇಕು.”

“ಸಾಧ್ಯವಿಲ್ಲ. ಆ ಪಥ್ಯದೂಟ ನನಗೆ ಬೇಕಿಲ್ಲ.”

“ಈಗ ಪಥ್ಯವನ್ನು ಡಾಕ್ಟರು ಸಡಲಿಸಿದ್ದಾರೆ.”

“ಏನದು, ನಿನ್ನ ಚಮತ್ಕಾರದ ಆಲೋಚನೆ?”

“ಈಗ ಹೇಳುವುದಿಲ್ಲ, ನೀನು ಬುಧವಾರ ಊಟಕ್ಕೆ ಹೋಗು.”

"ನೀನು [redacted]

"ಇಲ್ಲ. ನೀನು, ನಮ್ಮ ಚಿಕ್ಕಪ್ಪ ಇಬ್ಬರೇ. ನಿನ್ನೊಂದಿಗೆ ಅವರು ಮಾತನಾಡಬೇಕಂತೆ. ಬಹಳ ಕಾತುರರಾಗಿದ್ದಾರೆ...."

ಏನು ಸೋಜಿಗವಿರಬಹುದೋ ಎಂದು ಒಪ್ಪಿಕೊಂಡೆ. ಬುಧವಾರ ಹೋದೆ. ಅದೇ ಮೊದಲು ನಾನು ವೆಂಕೂ ಚಿಕ್ಕಪ್ಪನನ್ನು ನೋಡಿದುದು. ನಲವತ್ತೆಂಟು ಐವತ್ತು ವರ್ಷದ ಪ್ರಾಯ. ಕುಳ್ಳಗೆ, ಕಪ್ಪಗೆ ಕೋಣೆಯನಂತಿದ್ದ. ಅಷ್ಟು ಪಥ್ಯದಲ್ಲಿದಾಗಲೇ ಹೀಗಿದ್ದರೆ, ಮೊದಲು ಹೇಗಿದ್ದಿರಬೇಕು ಅಂದು ಕೊಂಡೆ.

ಬಹಳ ಸಂಭ್ರಮದಿಂದ ನನ್ನನ್ನು ಸ್ವಾಗತಿಸಿದ. ಸಾಧಾರಣವಾಗಿ ನಾನು ಯಾರ ಮನೆಗಾದರೂ ಹೋದರೆ ಯಾಕೆ ಬಂತಪ್ಪಾ ಈ ಪಿಶಾಚಿ ಎನ್ನುವ ಹಾಗೆ ನನ್ನನ್ನು ನೋಡುವ ವಾಡಿಕೆ. ವೆಂಕಣ್ಣಯ್ಯನಾದರೋ ನನ್ನನ್ನು ಅಪ್ಪಿ ಕೊಳ್ಳುವುದು ಬಾಕಿ...."ಇದೇ ಸುದಿನ. ನಿಮ್ಮನ್ನು ನೋಡಬೇಕೆಂಬ ಹಿರಿ ಯಾಸೆ ಬಾಧಿಸುತ್ತಿತ್ತು. ನನ್ನ ಸಂತೋಷಕ್ಕೆ ಇವತ್ತು ಎಣೆಯೇ ಇಲ್ಲ" ಎಂದ.

ನನಗೆ ವಿಸ್ಮಯವಾಯಿತು. ಜಾಸ್ತಿ ಮಾತಾಡದೆ ಅವನು ಹೇಳಿದ್ದಕ್ಕೆ ಹೂಗುಟ್ಟುತ್ತಾ ಹೋದೆ. "ಊಟಕ್ಕೇಳಿ" ಎಂದಾಗ ಕಾಲು ತೊಳೆದುಕೊಂಡು ಬರಲು ಬಚ್ಚಲು ಮನೆಗೆ ಹೋದೆ. ದಾರಿಯಲ್ಲಿ ಜವಾನ ಒಂದು ಚೀಟಿಯನ್ನು ಕೈಲಿಟ್ಟ. ವೆಂಕೂ ಬರಹ. "ನಾನು ಓದುತ್ತಿದ್ದ ಪುಸ್ತಕಗಳೆಲ್ಲಾ ಬೇರೆ ಹೆಸರಿನಿಂದ ನೀನೇ ಬರೆದದ್ದು ಎಂದು ಚಿಕ್ಕಪ್ಪನಿಗೆ ಹೇಳಿದ್ದೇನೆ. ನೀನು ಎಲ್ಲಾದರೂ ಬಿಟ್ಟುಕೊಟ್ಟೀಯೆ, ಹುಷಾರ್! ಸರ್ವ ನಾಶವಾದೀತು!" ಎಂದು ಬರೆದಿದ್ದ.

"ಏನು ಬಂತಪ್ಪಾ ಪೀಕಲಾಟ" ಎಂದುಕೊಂಡು ಊಟಕ್ಕೆ ಕೂತೆ. ಒಳ್ಳೇ ರಸ ಕವಳ. ಆ ವಾಂಗೀಭಾತು ನೆನಸಿಕೊಂಡರೆ ಈಗಲೂ ಬಾಯಲ್ಲಿ ನೀರೂರುತ್ತೆ.

ವೆಂಕಣ್ಣಯ್ಯನವರು "ನಮ್ಮ ವೆಂಕೂಗೆ ಇಂತಹ ಸಾಹಿತಿಗಳು ಸ್ನೇಹಿತ ರಾಗಿದ್ದಾರೆಂದು ಕನಸಿನಲ್ಲಿಯೂ ನೆನಸಿರಲಿಲ್ಲ. ಇದು ನಮ್ಮ ಪುಣ್ಯ" ಎಂದ.

"ಅಂತಹ ದೊಡ್ಡ ಸಾಹಿತಿಯೇನೂ ಅಲ್ಲ. ಎಲ್ಲಾ ನಿಮ್ಮ ಅಭಿಮಾನ" ಎಂದೆ.

"'ಪ್ರೇಮ ಜ್ಯೋತಿ'ಯನ್ನು ಓದುತ್ತಿದ್ದಾಗ ನನಗೆ ಮೈಯೆಲ್ಲಾ ರೋಮಾಂಚವಾಗುತ್ತಿತ್ತು!"

"ಹಾಗೆಯೇ?"

"'ಪ್ರಣಯ ನಗರಿ'ಯಂತೂ ವರ್ಣಿಸಲಸಾಧ್ಯ."

"ಹಾಗೆಯೇ!"

"'ವಿಧವೆಯೋ ಸಧವೆಯೋ?' ಎಂಬುದನ್ನು ಕೇಳುತ್ತಿದ್ದಾಗ ಕಣ್ಣಿನಲ್ಲಿ ನೀರು ಬಂತು."

"ಅಯ್ಯೋ ಪಾಪ!"

"'ಜಮೀನ್ದಾರ್ ರಂಗರಾಯರ ತ್ಯಾಗ'ದಿಂದ ಹೊಸ ಸ್ಫೂರ್ತಿಯುಂಟಾಯಿತು."

"ಹೌದೆ?"

"ತಾವು ಮಾನವನ ಪ್ರಕೃತಿಯನ್ನು ಚೆನ್ನಾಗಿ ಅರಿತಿರುವಿರಿ. ನಾವು ಸಮಾಜವನ್ನು ಎದುರಿಸಬೇಕು."

"ನಿಜ."

"ಕೀಳೇನು, ಮೇಲೇನು? ಜಾತಿಯೇನು, ಕುಲವೇನು? ವಿಧವೆಯಾದರೇನು, ಸಧವೆಯಾಗಬಾರದೆ?"

"ಆಗಬಾರದೆ?"

"ಈ ಕತೆಗಳನ್ನು ಬರೆದು ನೀವು ಸಮಾಜ ಸುಧಾರಕರಲ್ಲಿ ಅಗ್ರಸ್ಥಾನಕ್ಕೇರಿದ್ದೀರಿ."

"ಅಯ್ಯೋ ಬಹಳ ದೊಡ್ಡಮಾತು. ಅಷ್ಟಕ್ಕೆ ಅರ್ಹನಲ್ಲ."

"ಅದು ನಿಮ್ಮ ನಿರಹಂಕಾರ ಭಾವವನ್ನು ತೋರಿಸುತ್ತದೆ."

ನಾನು ಇದೇ ಸಮಯವೆಂದು ಕೇಳಿದೆ. "ಹಾಗಾದರೆ ಆ ಪುಸ್ತಕಗಳ ಧ್ಯೇಯವನ್ನು ಒಪ್ಪುವಿರಾ?"

"ಖಂಡಿತವಾಗಿಯೂ"

"ಯಾರು ಬೇಕಾದರೂ ಹೀಗೆ ನಡೆಯಬಹುದಲ್ಲವೆ?"

"ನಿಸ್ಸಂಕೋಚವಾಗಿ. ಅಂಥವರಿಗೆ ನನ್ನ ಬೆಂಬಲವಿದೆ."

"ನಿಮ್ಮ ವೆಂಕೂವೇ ಆ ರೀತಿ ಆಚರಿಸಿದರೆ?"

"ನನಗೆ ಬಹಳ ಸಂತೋಷ."

"ಅವನು ಅನ್ಯ ಜಾತಿಯವಳನ್ನು ಅಥವಾ ಜಾತಿ ಕುಲಗೋತ್ರಗಳಿಲ್ಲದವಳನ್ನು ಮದುವೆಯಾಗಲಿಚ್ಛಿಸಿದರೆ?"

ನನ್ನ ಅಡ್ಡಿಯೇನೂ ಇಲ್ಲ. ಅದನ್ನು ಸ್ವಾಗತಿಸುವೆನು. ಅವನಿಗೆ ಅಷ್ಟು ಧೈರ್ಯವಿರುವುದನ್ನು ನೋಡಿ ಆನಂದಿಸುವೆನು.''

ಆಗ ವೆಂಕುವಿನ ವಿಚಾರವನ್ನೆಲ್ಲಾ ವಿಶದವಾಗಿ ಹೇಳಿದೆ. ಅವನಿಗೆ ಹೆಚ್ಚು ಹಣ ಬೇಕಾಗಿರುವುದನ್ನೂ ಸೂಚಿಸಿದೆ.

ವೆಂಕಣ್ಣಯ್ಯನು ತಲೆಯಲ್ಲಾಡಿಸಿದನು. ''ಅವನು ಆ ರೀತಿ ಮದುವೆಯಾಗುವುದು ನನಗೆ ಸಂತೋಷ. ಆದರೆ ಹಣದ ವಿಷಯದಲ್ಲಿ ಸಾಧ್ಯವಿಲ್ಲ, ಮೊದಲಾಗಿದ್ದಿದರೆ ಆಲೋಚಿಸುತ್ತಿದ್ದೆ. ಈಗ ಸಾಧ್ಯವೇ ಇಲ್ಲ.''

''ಏಕೆ?''

''ಈಗ ನೀವು ನನಗೆ ಆಪ್ತರಾಗಿದ್ದೀರಿ. ನಿಮ್ಮಲ್ಲೇನು ಮುಚ್ಚುಮರೆ? ಬಹಳ ದಿನಗಳಿಂದಲೂ ನನ್ನಲ್ಲಿ ಅಡಿಗೆಗಿರುವಾಕೆಯನ್ನು ಈ ದಿವಸ ನೋಡಿದಿರಷ್ಟೆ. ಆಕೆಯ ಅಡಿಗೆಯ ಕೌಶಲ್ಯಕ್ಕೆ ಎಂದೋ ಮನಸೋತಿದ್ದೆ. ನನಗೆ ತಪ್ಪಿಸಿ ಇತರರು ಎಷ್ಟೋ ಸಲ ಆಕೆಯನ್ನು ಕರೆದುಕೊಳ್ಳಲು ಯತ್ನಿಸಿದರೂ ಆಕೆಯು ನನ್ನಲ್ಲಿಯೇ ನಿಂತದ್ದನ್ನು ನೋಡಿ ಎಷ್ಟೋ ಕೃತಜ್ಞನಾಗಿದ್ದೆ. ಆದರೆ, ಪ್ರೇಮ ದೃಷ್ಟಿಯಿಂದ ಎಂದೂ ನೋಡಿರಲಿಲ್ಲ. ಈಗ ನಿಮ್ಮ ಪುಸ್ತಕಗಳನ್ನೆಲ್ಲಾ ಓದಿಸಿ ಕೇಳಿದ ಮೇಲೆ ಅವಳಲ್ಲಿ ನನಗೆ ಪ್ರೀತಿಯಂಕುರಿಸಿದೆ. ವಿಧವೆಯಾದರೂ ಅವಳನ್ನು ಮದುವೆಯಾಗಲು ನಿಶ್ಚಯಿಸಿದ್ದೇನೆ. ಆಕೆಯೂ ಒಪ್ಪಿದ್ದಾಳೆ. ಸಿವಿಲ್ ವಿವಾಹ ಮುಂದಿನವಾರ ನಡೆಯುವುದು. ತಾವು ಖಂಡಿತ ಬರಬೇಕು. ಇನ್ನು ಮೇಲೆ ನನ್ನ ಆಸ್ತಿಗೆಲ್ಲಾ ಅವಳೇ ಸರ್ವಾಧಿಕಾರಿಣಿ. ನಮ್ಮಿಬ್ಬರಿಗೂ ಇನ್ನೂ ವಯಸ್ಸೇನೂ ಹೆಚ್ಚಿಲ್ಲ. ಮುಂದೆ ಹುಟ್ಟಬಹುದಾದ ಮಕ್ಕಳ ವಿಚಾರವನ್ನು ಗಮನಿಸಬೇಕಾಗಿದೆ. ಆದ್ದರಿಂದ ಈಗ ನಾನು ವೆಂಕುವಿಗೆ ಕೊಡುತ್ತಿರುವ ಹಣವನ್ನು ಮುಂದೆಯೂ ಕೊಡುವೆನಾದರೂ, ಒಂದು ಕಾಸೂ ಹೆಚ್ಚಿಸಲು ಸ್ವಾಧ್ಯವಿಲ್ಲ. ಅಲ್ಲದೆ ನೀವು ಹೇಳುವ ಹಾಗೆ ಅವನ ಬುದ್ಧಿಯೂ ಪ್ರಗತಿಪರವಾಗಿ ಪರಿವರ್ತನೆಯಾಗಿದ್ದಲ್ಲಿ, ಅವನೂ ನನ್ನ ಒಂದು ಕಾಸನ್ನೂ ಮುಟ್ಟಲಾರ. ಸ್ವತಃ ಸಂಪಾದಿಸಿ ಜೀವಿಸುತ್ತಾನೆಂಬ ಭರವಸೆ ನನಗಿದೆ'' ಎಂದುಬಿಟ್ಟ.

ಕೊನೆಗೆ ನಾನು ಹೊರಡುವಾಗ ''ನೀವು ನನ್ನ ಭಾಗಕ್ಕೆ ದೇವರು, ನನ್ನ ದೃಷ್ಟಿಕೋಣವನ್ನು ಬದಲಾಯಿಸಿದ್ದೀರಿ. ಅನೇಕ ಸ್ವಾರ್ಥಿಗಳ ಮೇಲೆಯೂ ಈ ಪರಿಣಾಮವುಂಟಾಗಲೆಂದು ಹಾರೈಸುತ್ತೇನೆ'' ಎಂದು ಹೇಳಿ ಬೀಳ್ಕೊಟ್ಟ.

ನಾನು ಮನೆಗೆ ಬಂದು ಖಿನ್ನನಾಗಿ ಕೂತಿದ್ದೆ. ಕಾಮಣ್ಣ——ಂದು ಹಾಲು ಸಿದ್ಧವಾಗಿದೆ, ತರಲೆ?'' ಎಂದ.

ನಾನು "ಕಾಮಣ್ಣಾ, ನಾವು ಮಾಡಿದ ತಂತ್ರ ಹೇಗಾಯಿತು ಕಂಡೆಯಾ?" ಎಂದು ಎಲ್ಲವನ್ನೂ ಹೇಳಿದೆ.

ಕಾಮಣ್ಣನು "ನನಗೇನೂ ಆಶ್ಚರ್ಯವಿಲ್ಲ. ಹೀಗಾಗಬಹುದೆಂದು ಊಹಿಸಿದ್ದೆ" ಎಂದ.

"ಹಾಗಾದರೆ ಇದನ್ನು ನೀನು ಮೊದಲೇ ಕಂಡಿದ್ದಿಯಾ!"

"ಒಂದು ರೀತಿಯಲ್ಲಿ ಊಹಿಸಿದ್ದೆ, ಅಷ್ಟೆ."

"ಆ ಅಡಿಗೆಯಾಕೆಯು ನಿನ್ನ ಸಂಬಂಧಿಯಲ್ಲವೆ?"

"ಹೌದು, ನನ್ನ ಅಕ್ಕನ ಮಗಳು."

"ಈಗ ಲಕ್ಷಾಧಿಕಾರಿಣಿಯಾಗುವಳು."

"ಪಾಪ, ಚಿಕ್ಕ ವಯಸ್ಸಿನಲ್ಲಿಯೇ ವಿಧವೆಯಾದಳು. ಬಹಳ ಕಷ್ಟಪಟ್ಟಿದ್ದಾಳೆ.

"ಈಗ ವೆಂಕುವಿಗೆ ಚಿಕ್ಕಪ್ಪನ ಆಸ್ತಿಯಲ್ಲೇನೂ ಸಿಕುವಹಾಗಿಲ್ಲ."

"ಸಿಕ್ಕುವ ಹಾಗೆ ಕಾಣೆ."

"ಆ ಮಿಸ್ ಮಂಜುಳವೂ ಈಗ ಅವನನ್ನು ಮದುವೆಯಾಗಲು ಒಪ್ಪುತ್ತಾಳೋ ಇಲ್ಲವೋ."

"ಖಂಡಿತವಾಗಿಯೂ ಇಲ್ಲ. ಅವಳ ವಿಷಯ ವಿಚಾರಿಸಿದ್ದೇನೆ. ಅವಳಿಗೆ ದುಡ್ಡಿನಾಸೆ ಬಹಳ."

"ಹಾಗಾದರೆ ವೆಂಕುವಿಗೆ ಈಗ ಮದುವೆ ಇಲ್ಲ?"

"ಇಲ್ಲ."

"ಹೀಗಾಗುವುದು ನಿನಗೆ ಸಮ್ಮತವೆ?"

"ಶ್ರೀ ಕೃಷ್ಣನು ಗೀತೆಯಲ್ಲಿ ವರ್ಣಸಂಕರವು ಕೂಡದೆಂದು ಹೇಳಿದ್ದಾನೆ ನನ್ನ ಅಭಿಮತವೂ ಹಾಗೆಯೇ....ಹಾಲನ್ನು ಸಣ್ಣ ಮೇಜಿನ ಮೇಲಿಟ್ಟಿದ್ದೇನೆ.'

---

# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

ವಾರ್ಷಿಕ ಚಂದಾ: ಕೇವಲ 3 ರೂ. ಗಳು (ಅಂಚೆ ವೆಚ್ಚ ಸಹಿತ)

—— o ——

**ನಮ್ಮ ಹೊಸ ಮಾರಾಟಗಾರರು**

ಶ್ರೀ|| ಎಸ್. ಗೋವಿಂದರಾವ್ .... ಚನ್ನಗಿರಿ
,, ಬಿ. ಆರ್. ವಾಸುದೇವರಾವ್ .... ಶಿಕಾರಿಪುರ
,, ಆರ್. ವಿ. ವಾಸನ್ .... ಬೌರಿಂಗಪೇಟೆ
,, ನರಹರಿ ಜೋಯಿಸ್ .... ನ್ಯಾಮತಿ

"ನನ್ನ ಟೀ-ಸೆಟ್ಟು ಅಪರೂಪ ಪಿಂಗಾಣಿಯಿಂದಲೇ ತಯಾರಾದುದು!"

"[ತನ್ನಲ್ಲಿ] ಆದರೂ, ನೀನು ತಯಾರಿಸುವ ಟೀಯೇನೋ ಅಷ್ಟೇನೂ ಸಮರ್ಪಕವಾಗಿಲ್ಲ!"

ಆಹ್ಲಾದ ಮತ್ತು ಮನರಂಜನೆಗಾಗಿ ಲಕ್ಷಗಟ್ಟಲೆ ಜನರು ಟೀಯನ್ನು ಸೇವಿಸುವರು. ಹೀಗಿದ್ದರೂ, ಟೀಯನ್ನು ತಯಾರಿಸಿಕೊಡುವವರನೇಕರಿಗೆ ಉತ್ತಮ ಟೀ ಯೆಂದರೇನೆಂಬುದು ಗೊತ್ತೇಇಲ್ಲ ಉತ್ತಮ ಟೀಗೆ ಹೆಚ್ಚು ಬೆಲೆ ತೆರಬೇಕಾಗಿಲ್ಲ. ಪಂಚ ಸುಲಭ ಸೂತ್ರಗಳನ್ನು ಅನುಸರಿಸುವುದರ ಪರಿಣಾಮವೇ ಅದು. ನೀವು ತೆರುವ ಹಣಕ್ಕೆ ಪೂರ್ಣ ಪ್ರತಿಫಲವನ್ನೂ, ನಿಮ್ಮ ಟೀಯ ಪೂರ್ತಿ ಪರಿಮಳವನ್ನೂ ಪಡೆಯಬೇಕಾದರೆ, ಆ ಸೂತ್ರಗಳನ್ನು ಉರುವು ಹೊಡೆಯಿರಿ. ಮತ್ತು ಅವನ್ನು ನಿಮ್ಮ ಮನೆಯಲ್ಲಿ ತಪ್ಪದೆ ಅನುಸರಿಸುವಂತೆ ಮಾಡಿರಿ.

1. ಹೊಸದಾಗಿ ಕಾದು, ಆಗತಾನೇ ಕುದಿಸಿದ ನೀರನ್ನೇ ಬಳಸಿರಿ.
2. ಬಳಸುವ ಮುಂಚೆ ಪಾತ್ರೆಯನ್ನು ಬೆಚ್ಚಗೆ ಮಾಡಿರಿ.
3. ಒಬ್ಬೊಬ್ಬರಿಗೆ ಒಂದೊಂದು ಟೀ ಸ್ಪೂನು ತುಂಬ, ಪಾತ್ರೆಗಾಗಿ ಒಂದು ಸ್ಪೂನಿನಷ್ಟು ಉತ್ತಮ ಟೀ ಸೊಪ್ಪನ್ನು ಹಾಕಿರಿ.
4. ಬಳಸುವ ಮುಂಚೆ ಟೀ ಸೊಪ್ಪು ೫ ರಿಂದ ೬ ನಿಮಿಷಗಳವರೆಗೆ ಕಾಯ ಬಿಡಿರಿ.
5. ಹಾಲನ್ನು ಕಪ್ಪಿಗೆ ಬೆರೆಸಿರಿ, ಟೀ ಪಾತ್ರೆಗಲ್ಲ.

'ಟೀ ಬಗ್ಗೆ ಸೂಚನೆ' ಎಂಬ ಚಿಕ್ಕ ಉಚಿತ ಪುಸ್ತಕ ಬೇಕೆಂದು ಕಮಿಷನರ್, ಸೆಂಟ್ರಲ್ ಟೀ ಬೋರ್ಡ್, ಪೋಸ್ಟ್ ಬಾಕ್ಸ್ ನಂ. 2172, ಕಲಕತ್ತ 1-ಇವರಿಗೆ ಬರೆದು ತರಿಸಿಕೊಳ್ಳಿರಿ.

ಈ ಪಂಚ ಸೂತ್ರ ಕ್ರಮವನ್ನನುಸರಿಸಿ

ಉತ್ತಮ **ಟೀ**



ತಯಾರಿಸಿಕೊಳ್ಳಿರಿ.

CTBX-328KN

ಸೆಂಟ್ರಲ್ ಟೀ ಬೋರ್ಡಿನವರ ಪ್ರಕಟನೆ.